

# ಶ್ರೀ ಸಿದ್ಧರಾಮ ಪೋಲೀಸ ಪಾಟೀಲ ಅವರ ಬದುಕು - ಬರಹ

(ಕ.ರಾ.ಶಿ.ಸಂಸ್ಥೆ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ, ಇವರಿಗೆ ಎಂ.ಫಿಲ್ ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ )


ಸಂಶೋಧಕರು

**ಜೈಶ್ರೀ ಶಿವರಾಜ ಪಾಟೀಲ**

ಸಂಶೋಧನಾ ಮಾರ್ಗದರ್ಶಕರು,

**ಡಾ. ಈಶ್ವರಯ್ಯ ಮಠ**

ಕ.ರಾ.ಶಿ.ಸಂಸ್ಥೆ ಸ್ನಾತಕೋತ್ತರ ಕನ್ನಡ
ಸಂಶೋಧನ ಕೇಂದ್ರ ಬೀದರ







## ಕನ್ನಡ ವಿಶ್ವವಿದ್ಯಾಲಯ, ಹಂಪಿ
## ವಿದ್ಯಾರಣ್ಯ - 583 276

242



# ಶ್ರೀ ಸಿದ್ಧರಾಮ ಪೋಲೀಸ ಪಾಟೀಲ ಅವರ ಬದುಕು - ಬರಹ

(ಕ.ರಾ.ಶಿ.ಸಂಸ್ಥೆ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ, ಇವರಿಗೆ ಎಂ.ಫಿಲ್ ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ )


ಸಂಶೋಧಕರು

**ಜೈಶ್ರೀ ಶಿವರಾಜ ಪಾಟೀಲ**

ಸಂಶೋಧನಾ ಮಾರ್ಗದರ್ಶಕರು,

**ಡಾ. ಈಶ್ವರಯ್ಯ ಮಠ**

ಕ.ರಾ.ಶಿ.ಸಂಸ್ಥೆ ಸ್ನಾತಕೋತ್ತರ ಕನ್ನಡ
ಸಂಶೋಧನ ಕೇಂದ್ರ ಬೀದರ




## ಕನ್ನಡ ವಿಶ್ವವಿದ್ಯಾಲಯ, ಹಂಪಿ
## ವಿದ್ಯಾರಣ್ಯ - 583 276

# ಪ್ರಮಾಣ ಪತ್ರ

"ಶ್ರೀ ಸಿದ್ಧರಾಮ ಪೋಲೀಸ ಪಾಟೀಲ ಅವರ ಬದುಕು - ಬರಹ" ಎಂಬ ನಿಬಂಧವನ್ನು ಡಾ. ಈಶ್ವರಯ್ಯಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್, ಪದವಿಗಾಗಿ ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ಬೀದರ

ದಿನಾಂಕ: 15/11/07

JPatil

**ಜೈಶ್ರೀ ಶಿವರಾಜ ಪಾಟೀಲ್**
ಎಂ.ಫಿಲ್ ವಿದ್ಯಾರ್ಥಿನಿ,
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ
ಸಂಶೋಧನ ಕೇಂದ್ರ, ಬೀದರ

# ಮಾರ್ಗದರ್ಶಕರ ಪ್ರಮಾಣ ಪತ್ರ

"ಶ್ರೀ ಸಿದ್ಧರಾಮ ಪೋಲೀಸ ಪಾಟೀಲ ಅವರ ಬದುಕು - ಬರಹ" ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಜೈಶ್ರೀ ಶಿವರಾಜ ಪಾಟೀಲ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ಬೀದರ

ದಿನಾಂಕ: 14/11/07

ಡಾ. ಈಶ್ವರಯ್ಯ ಮಠ
ಸಂಶೋಧನಾ ಮಾರ್ಗದರ್ಶಕರು
ಕ.ರಾ.ಶಿ. ಸಂಸ್ಥೆ ಸ್ನಾತಕೋತ್ತರ ಕನ್ನಡ
ಸಂಶೋಧನ ಕೇಂದ್ರ, ಬೀದರ

# ಪರಿವಿಡಿ

## ಅಧ್ಯಾಯ-1

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಕನ್ನಡ ಸಾಹಿತ್ಯವು ತುಂಬಾ ವಿಶಿಷ್ಟವಾದ ಸ್ಥಾನವನ್ನು ಹೊಂದಿದೆ. ಕನ್ನಡ ಸಾಹಿತ್ಯವು ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ಯುಗದ ವರೆಗೂ ಹಲವಾರು ಪ್ರಕಾರ ಹಾಗೂ ವೈವಿಧ್ಯಗಳಲ್ಲಿ ಹೊರ ಹೊಮ್ಮಿರುವುದು ಕಂಡುಬರುತ್ತದೆ. ಅಂದಿನಿಂದ ಇಂದಿನವರೆಗೂ ಕನ್ನಡವನ್ನು ಉಳಿಸುವಲ್ಲಿ, ಕನ್ನಡಕ್ಕೆ ನೀರೆರೆದು ಬೆಳಸಿದ ಮಹನೀಯರ ಸಂಖ್ಯೆ ಗಣನೀಯವಾದದ್ದು, ಹೊಸಗನ್ನಡ ಸಾಹಿತ್ಯವು ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ವಿನೂತನ ಅಧ್ಯಾಯವನ್ನೆ ತೆರೆಯಿತು. ಈ ಹೊಸಗನ್ನಡ ಸಾಹಿತ್ಯವು ಆಂಗ್ಲ ಸಾಹಿತ್ಯದ ಸ್ಫೂರ್ತಿಯಿಂದ ತನ್ನದೇ ಆದ ಮಾರ್ಗದಲ್ಲಿ ಭೋರ್ಗರೆಯುತ್ತಾ, ಒಂದು ಸ್ವತಂತ್ರ ಪ್ರವಾಹವಾಗಿ ಮುಂದುವರೆಯಿತು. ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯದ ರೆಂಬೆಕೊಂಬೆಗಳಿಗೆ ಹೊಸ ಚಿಗುರು ಅಂಕುರಿಸಲು ಆರಂಭವಾಯಿತು.

ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಸಣ್ಣಕಥೆ, ಕಾದಂಬರಿ, ನಾಟಕ, ಕಾವ್ಯ, ಪ್ರಬಂಧ, ವಿಮರ್ಶೆ, ಮಕ್ಕಳ ಸಾಹಿತ್ಯ, ಅನುವಾದ ಮುಂತಾದ ಪ್ರಕಾರಗಳು ಭರದಿಂದ ಸಾಗಲು ಆರಂಭವಾಯಿತು. ಈ ಸಂದರ್ಭದಲ್ಲಿ ಕಾವ್ಯ ಪ್ರಕಾರವು ತುಂಬಾ ಪ್ರಭಾವ ಪೂರ್ಣವಾಗಿ ಹೊರ ಹೊಮ್ಮಿ ಬಹುಜನರನ್ನು ಆಕರ್ಷಿಸಿತು. ನಾಡುನುಡಿ, ದೇಶಪ್ರೇಮ, ಸ್ವಾತಂತ್ರ್ಯ, ಸಮಾನತೆ, ನಿಸರ್ಗ ವರ್ಣನೆ, ಪ್ರೀತಿ, ಪ್ರೇಮ, ಸೌಹಾರ್ದತೆ ಹೀಗೆ ಮುಂತಾದ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತಾ ಅದು ಉತ್ತುಂಗ ಶಿಖರಕ್ಕೇರಿತು. ಈ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸುವಲ್ಲಿ ಹಲವಾರು ಜನ ಕವಿ ಪುಂಗವರು ಅನುಪಮ ಸೇವೆ ಸಲ್ಲಿಸಿ ಅವಿಸ್ಮರಣೀಯರಾಗಿದ್ದಾರೆ. ಅಂತಹ ಮಹನೀಯರಲ್ಲಿ ಕನ್ನಡದ ಕಣ್ವ ಬಿ.ಎಂ.ಶ್ರೀ, ರಸ ಋಷಿ

ಕುವೆಂಪು, ವರಕವಿ ಬೇಂದ್ರೆ, ನವ್ಯ ಕವಿ ಗೋಪಾಲ ಕೃಷ್ಣ ಅಡಿಗ, ಶೃಂಗಾರ ಕವಿ ನರಸಿಂಹ ಸ್ವಾಮಿ, ಭಾವ ನಿತ್ಯೋತ್ಸವದ ಕವಿ ನಿಸ್ಸಾರ ಅಹಮ್ಮದ್ ಮುಂತಾದವರು.ಅಂಥ ಮಹನೀಯರಲ್ಲಿ ಶ್ರೀ ಸಿದ್ದರಾಮ ಪೋಲೀಸ ಪಾಟೀಲರು ಒಬ್ಬರು.

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಉದಯಿಸಿದ್ದು ಕನ್ನಡ ನಾಡಿನ ಗ್ರಾಮೀಣ ಕುಟುಂಬದಲ್ಲಿ. ಇವರು ಓದಿ ಇಂಜೀನಿಯರಾದರೂ, ಅವರ ಹೃದಯದ ತುಂಬೆಲ್ಲಾ ಕನ್ನಡದ ಒಲವು. ವೃತ್ತಿಯಲ್ಲಿ ಮೆಕಾನಿಕಲ್ ಇಂಜಿನೀಯರರಾದರೂ, ಪ್ರವೃತ್ತಿಯಲ್ಲಿ ಕನ್ನಡ ಸಾಹಿತಿ. ಎರಡು ವಿಭಿನ್ನ ಸಂಸ್ಕೃತಿಗಳ ನಡುವೆ ನಿಂತು ಆಂತರಿಕ ತುಡಿತ ತುಮುಲಗಳನ್ನು ಹೊರ ಹಾಕುವಾಗ ಅಂತಃ ಸಮತೆಯನ್ನು ಕದಡದೆ ಕಾಪಾಡಿಕೊಂಡು ಬಂದಿರುವ ಚೇತನ. ಇವರೊಬ್ಬ ಕನ್ನಡ ಸಾಹಿತ್ಯ ಲೋಕದ ಅಪರೂಪದ ಬರಹಗಾರರಾಗಿ ಆಕರ್ಷಿಸುತ್ತಾರೆ. ಹೀಗಾಗಿ ಇವರ ಜೀವನ ಹಾಗೂ ಸಾಹಿತ್ಯ ಸಾಧನೆ ಕುರಿತು ಅಧ್ಯಯನ ಕೈಗೊಳ್ಳುವ ಆಗತ್ಯವಿದೆಯೆಂದು ಇಲ್ಲಿ ಭಾವಿಸಲಾಗಿದೆ.

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಸಾಹಿತ್ಯ ಕ್ಷೇತ್ರದಲ್ಲಿ ಪಾದಾರ್ಪಣೆ ಮಾಡಿದ್ದು, ''ನಾನೂ ನಮ್ಮ ಪ್ಪನ್ಹಾಂಗS'' ಎಂಬ ಕವನ ಸಂಕಲನದ ಮುಖಾಂತರ. ಇದೊಂದು ಅತ್ಯುತ್ತಮ ಸಂಕಲನವಾಗಿದೆ. ಇಂತಹ ಅದ್ಭುತ ಕವಿಯ ಬದುಕು ಹಾಗೂ ಬರಹದ ಕುರಿತಾಗಿ ಬೆಳಕು ಚೆಲ್ಲುವುದು ಯೋಗ್ಯವೆಂಬ ಭಾವನೆಯಿಂದ ಪ್ರಸ್ತುತ ಪ್ರಬಂಧದ ರಚನೆ ಮಾಡಲಾಗಿದೆ. ಒಬ್ಬ ಕವಿಯ ಅಥವಾ ಬರಹಗಾರನ ಬಗ್ಗೆ ಸಂಶೋಧನಾಧ್ಯಯನ ಕೈಕೊಳ್ಳುವಾಗ, ಆ ವ್ಯಕ್ತಿಯ ಬರಹದಷ್ಟೇ, ಅವರ ಬದುಕು ಸಹ ಮಹತ್ವದ್ದಾಗಿರುತ್ತದೆ. ಅವರ ಸಾಧನೆಯ ಉತ್ತುಂಗ ಶಿಖರಕ್ಕೆ ನಿಂತಾಗ, ಆ ಶಿಖರಾರೋಹಣದ ಪ್ರತಿ ಹೆಜ್ಜೆ, ಪ್ರತಿ ಮೆಟ್ಟಿಲೂ ಸಹ ಮುಖ್ಯವಾಗಿರುತ್ತದೆ. ಆದ್ದರಿಂದ ಆ ಪ್ರತಿ ಬೆಳವಣಿಗೆಯೂ ಅಧ್ಯಯನಕ್ಕೆ ಮಹತ್ವಪೂರ್ಣವಾದದ್ದು. ಆ ಹಿನ್ನೆಲೆಯಲ್ಲಿ ಶ್ರೀ ಸಿದ್ಧರಾಮ ಪೋಲೀಸ ಪಾಟೀಲ ಅವರ ಜೀವನದ ಹಂತ ಹಂತದ ವಿವರಗಳ ಮಾಹಿತಿಯನ್ನು ಸಂಗ್ರಹಿಸಿ; ಅದನ್ನು ಪ್ರಕಟಪಡಿಸಿದಾಗ ಮಾತ್ರ ಆ ವ್ಯಕ್ತಿಯ ಕುರಿತಾಗಿ ಮಾಡಿದ ಸಂಶೋಧನೆ ಅರ್ಥಪೂರ್ಣವಾಗುತ್ತದೆ. ಈ ದೃಷ್ಟಿಯಿಂದ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಮನೆತನದ ಹಿನ್ನೆಲೆ, ಜನನ, ಬಾಲ್ಯ, ಶಿಕ್ಷಣ, ಉದ್ಯೋಗ, ಸಾಹಿತ್ಯಿಕ ಪ್ರಭಾವ, ಪ್ರೇರಣೆ, ಕೌಟುಂಬಿಕ ಜೀವನದ ವಿವರಗಳು ಅರಿಯುವುದು ಮುಖ್ಯವಾಗಿರುತ್ತದೆ.

ಕವಿಯ ಬರಹವು ಇನ್ನೊಂದು ಮಹತ್ವದ ಭಾಗವಾಗಿದೆ. ಯಾವುದೇ ವ್ಯಕ್ತಿಯೊಬ್ಬರ ಬದುಕು ಹಾಗೂ ಬರಹಗಳು ಅವರ ದೇಹ ಮತ್ತು ಜೀವನಕ್ಕಿರುವ ಸಂಬಂಧದಂತೆ ಒಂದನ್ನು ಬಿಟ್ಟು ಇನ್ನೊಂದು ಇರಲಾರದು. ಸಾಹಿತಿಯ ಬದುಕು ಹಾಗೂ ಬರಹಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಹೀಗಾಗಿ ಕನ್ನಡದ ಹೆಮ್ಮೆಯ ಬರಹಗಾರರಾಗಿರುವ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಬದುಕು- ಬರಹಗಳೆರಡನ್ನೂ ಸಂಶೋಧನ ಅಧ್ಯಯನಕ್ಕೊಳಪಡಿಸುವುದು ಅತ್ಯಂತ ಮಹತ್ವದ್ದಾಗಿರುತ್ತದೆ. ಅವರು ಸಾಹಿತ್ಯ ಕ್ಷೇತ್ರದಲ್ಲಿ ಬರೆಯಲು ಪ್ರಾರಂಭಿಸಿದ್ದಾಗಿನಿಂದ ಪ್ರಸ್ತುತ ಸಂದರ್ಭದವರೆಗೂ ಅವರ ಲೇಖನಿ ವೈವಿಧ್ಯಮಯವಾಗಿದ್ದು, ಸಾಹಿತ್ಯ ಕ್ಷೇತ್ರದಲ್ಲಿ ವಿಹರಿಸಿದ ರೀತಿ ನೀತಿಯನ್ನು ಸರಿಯಾಗಿ ವಿವರಿಸುವ ಅಗತ್ಯವಿದೆ. ಅವರ ಬರಹವನ್ನು ಹತ್ತು ಹಲವು ದೃಷ್ಟಿಕೋನಗಳಿಂದ ಅಧ್ಯಯನಕ್ಕೊಳಪಡಿಸಿ, ವಿಮರ್ಶಾತ್ಮಕವಾಗಿ ವಿಶ್ಲೇಷಿಸಲು ಈ ನಿಬಂಧದಲ್ಲಿ ಪ್ರಯತ್ನಿಸಲಾಗಿದೆ.

ಶ್ರೀ ಸಿದ್ಧರಾಮ ಪೋಲೀಸ ಪಾಟೀಲ ರವರ ಸಾಹಿತ್ಯ ಕ್ಷೇತ್ರ ಬಹಳ ವಿಶಾಲವಾದ ವ್ಯಾಪ್ತಿಯನ್ನು ಒಳಗೊಂಡಿದೆ. ಇವರ ಸಾಹಿತ್ಯವನ್ನು ಇತರ ಸಾಹಿತ್ಯಗಳ ಬರಹಕ್ಕಿಂತ ವಿಭಿನ್ನವಾದ ದೃಷ್ಟಿಕೋನದಿಂದ ಅಧ್ಯಯನ ಮಾಡುವ ಅಗತ್ಯವಿದೆ. ಏಕೆಂದರೆ ಇಂಜಿನಿಯರ್ ವಿದ್ಯಾರ್ಥಿಯಾಗಿರುವ ಅವರು, ವಿಭಿನ್ನ ಅನುಭವಗಳ ಮಧ್ಯೆ ನಿಂತು ಬರವಣಿಗೆಯನ್ನು ಪೂರೈಸಿದ್ದಾರೆ. ಜ್ಞಾನ, ಪ್ರತಿಭೆ, ಪಾಂಡಿತ್ಯದಲ್ಲಿ ಒಬ್ಬರಿಗಿಂತ ಇನ್ನೊಬ್ಬರು ಅಸಾಮಾನ್ಯರಾಗಿರುತ್ತಾರೆ. ಈ ಜ್ಞಾನ ವಾಹಿನಿಯ ಪ್ರವಾಹಕ್ಕೆ ಕೊನೆಯೆಂಬುದಿಲ್ಲ. ಒಬ್ಬರು ಇನ್ನೊಬ್ಬರಿಗಿಂತ ತುಂಬಾ ವಿಶಿಷ್ಟವಾಗಿ ಬರೆಯಬಹುದು. ಆದರೆ ಒಬ್ಬ ಇಂಜಿನೀಯರ್ ವಿದ್ಯಾರ್ಥಿಯಾಗಿ ಕನ್ನಡ ಸಾಹಿತ್ಯದಲ್ಲಿ ಕೃಷಿ ಮಾಡುವ ಅವರ ಆಸಕ್ತಿ, ಛಲದ ಮುಂದಿನ ಸವಾಲು ಸುಲಭವಾಗಿರಲಿಲ್ಲವೆಂದು ಹೇಳಬಹುದಾಗಿದೆ. ಅವರು ಸಾಧಿಸಿದ ಸಾಹಿತ್ಯಿಕ ಸಾಧನೆ ಶ್ಲಾಘನೀಯವಾದದ್ದು.

ಒಬ್ಬ ಖ್ಯಾತ ಬರಹಗಾರನ ಕುರಿತಾಗಿ ಅಧ್ಯಯನ ಮಾಡುವ ಸಂದರ್ಭದಲ್ಲಿ ಆ ಸಾಹಿತ್ಯಕಾರನ ಬದುಕಿನ ಬಗ್ಗೆ ಅರಿತುಕೊಳ್ಳುವುದು ಮಹತ್ವದ ಸಂಗತಿಯಾಗಿದೆ. ಅದರಲ್ಲೂ ಶ್ರೀ ಸಿದ್ಧರಾಮ ಪೋಲೀಸ ಪಾಟೀಲ ರವರಂತಹ ಜನಪ್ರಿಯ ವ್ಯಕ್ತಿಯ ಕುರಿತಾಗಿ ಅಭ್ಯಾಸ ಮಾಡುವಾಗ ಅವರ ಜೀವನದ ಪದರು ಪದರುಗಳ ಕುರಿತು ವಿವರಿಸುವುದು ಅನಿವಾರ್ಯವಾಗಿದೆ. ಅವರ ಮನೆತನ,

ಬೆಳೆದು ಬಂದ ಪರಿಸರ, ಬಾಲ್ಯ ಮತ್ತು ಶಿಕ್ಷಣ, ಉದ್ಯೋಗ, ಸಾಹಿತ್ಯಿಕ ಪರಿಸರ, ಕೌಟುಂಬಿಕ ಜೀವನ, ಸಂದ ಗೌರವಗಳು ಮುಂತಾದ ವಿಷಯಗಳನ್ನು ಗುರುತಿಸುತ್ತಾ ಬರವಣಿಗೆಯ ಮೇಲೆ ಬೆಳಕು ಬೀರುವುದು ಸಮಂಜಸವಾಗುತ್ತದೆ. ಈ ಹಿನ್ನಲೆಯಲ್ಲಿ ಪ್ರಸ್ತುತ ನಿಬಂಧದ ರಚನೆಯು ಮುಂದುವರಿದಿದೆ.

ಅಧ್ಯಾಯ- ಎರಡು

# ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಜೀವನ ಮತ್ತು ಸಾಧನೆ.

1. ಮನೆತನ
2. ಬಾಲ್ಯ ಮತ್ತು ಶಿಕ್ಷಣ
3. ಸಾಹಿತ್ಯಿಕ ಹಿನ್ನೆಲೆ ಹಾಗೂ ಪರಿಸರ
4. ವೃತ್ತಿ ಪ್ರವೃತ್ತಿ
5. ಕೌಟುಂಬಿಕ ಜೀವನ
6. ಪ್ರಶಸ್ತಿ ಮತ್ತು ಗೌರವ
7. ವ್ಯಕ್ತಿತ್ವ

## ಅಧ್ಯಾಯ-2

## ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಜೀವನ ಮತ್ತು ಸಾಧನೆ

**"Success always comes to those who dare and act but it does not go to the timed"** ಎಂದು ಇಂಗ್ಲೀಷಿನಲ್ಲಿ ಒಂದು ಗಾದೆ ಇದೆ. ''ದೈವವನ್ನು ಹಳಿಯುತ್ತ ಮೂಲೆಯಲ್ಲಿ ಕುಳಿತುಕೊಳ್ಳುವ ಹೇಡಿಗೆ ಯಶಸ್ಸು ದೊರೆಯದು. ಅದು ಸಾಹಸದಿಂದ ಮುನ್ನುಗ್ಗಿ ಕಾರ್ಯ ಮಾಡುವ ಕಾರ್ಯಶೀಲರಿಗೆ ಮಾತ್ರ ಮೀಸಲಾಗಿರುವುದು.''[1] ಈ ಉಕ್ತಿಗೆ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಜೀವನದಲ್ಲಿ ಸಾಧಿಸಿದ ಸಾಧನೆ ಉತ್ತಮ ನಿದರ್ಶನವಾಗಿದೆ.

ಒಬ್ಬ ಕವಿಯ ಹಿನ್ನೆಲೆಯನ್ನು ತಿಳಿದುಕೊಳ್ಳಬೇಕಾದರೆ, ಆತ ಹುಟ್ಟಿದ ಊರು, ತಾಯಿ-ತಂದೆ, ಸುತ್ತಲಿನ ಪರಿಸರ, ಸಂಘಗಳ, ಮಿತ್ರರ ಸಂಬಂಧ, ಮುಂತಾದವುಗಳ ಬಗ್ಗೆ ತಿಳಿದುಕೊಳ್ಳುವುದು ಅವಶ್ಯಕತೆಯೆನಿಸುವುದು. ಕವಿಯೊಬ್ಬ ಸೃಜನ ಶೀಲನಾಗಿ ಹೊರ ಹೊಮ್ಮಿ ಬರಬೇಕಾಗಿದೆ. ಈ ವಿಷಯಗಳು ಮಹತ್ವ ಪಡೆಯುತ್ತವೆ. ಅವರ ಮೇಲೆ ಉಂಟಾದ ಪ್ರಭಾವ ಅವರು ಪಡೆದ ಪ್ರೋತ್ಸಾಹ ಮುಖ್ಯವಾದವುಗಳು. ಓದಿ ಡಿಗ್ರಿ ಪಡೆದವರು ಮಾತ್ರ ಕವಿ ಸಾಹಿತಿಯಾಗುವರೆಂಬ ಮಾತಿಗೆ ತದ್ವಿರುದ್ಧವಾಗಿ, ಓದದೇ ಬರೆಯದೇ ಕವಿಗಳಾದವರು, ಹಳ್ಳಿಗಳಲ್ಲಿ ಈಗಲೂ ಸಾಕಷ್ಟು ಜನರು ಸಿಗುವರು. ಅದಕ್ಕೆ 'ಕವಿರಾಜ ಮಾರ್ಗ'ದಲ್ಲಿ ಶ್ರೀ ವಿಜಯ ಕವಿಯು ಹೇಳಿದ 'ಕುರಿತೋದೆಯು ಕಾವ್ಯ ಪ್ರಯೋಗ ಪರಿಣಿತಿ ಮತಿಗಳ್ ಈ ನಾಡವರ್' ಎಂಬುದು ಸತ್ಯವಾದ ಮಾತಾಗಿದೆ. ಅದರಲ್ಲೂ ಕಲಬುರ್ಗಿ ಜಿಲ್ಲೆಯ ಅಳಂದ ಮತ್ತು ಅಫಜಲಪೂರ ತಾಲೂಕಿನಾದ್ಯಂತ ಇಂಥ ಬಹಳಷ್ಟು ಜನಪದ ಕವಿಗಳು, ತತ್ವಪದಕಾರರು ನಮಗೆ ಕಾಣದೊರೆಯುತ್ತಾರೆ. ಇವರ್‍ಯಾರೂ ಶಾಲೆಗೆ ಹೋಗಿ ಕನ್ನಡವನ್ನು ಓದಲು ಬರೆಯಲು ಕಲಿತವರಲ್ಲ.

---

[1] ಡಾ|| ಆರ್.ಸಿ. ಹಿರೇಮಠ - ಜೀವನ ಮತ್ತು ಸಾಧನೆ - ಶಶಿಕಲಾ ಎಸ್. ದಂಡಿಗಿ ಮಠ.

ಡಿಗ್ರಿ ಪಡೆದವರಲ್ಲ. ಸ್ವಂತ ಪ್ರಯತ್ನದಿಂದ ಮನೆಯಲ್ಲೇ ಅಭ್ಯಾಸ ಮಾಡಿ ಸಾಹಿತ್ಯವನ್ನು ಕರಗತ ಮಾಡಿಕೊಂಡವರು. ಅವರು ರಚಿಸಿದ ನಾಟಕ, ಬಯಲಾಟ, ಕವನಗಳನ್ನು ನೋಡಿದಾಗ, ನಮಗೆ ಆಶ್ಚರ್ಯವಾಗುವುದು. ವೇದ, ಆಗಮ, ಪುರಾಣ, ಶಾಸ್ತ್ರ, ಸಂಬಂಧದ ಎಲ್ಲ ವಿಷಯಗಳನ್ನು ತಮ್ಮ ಸಾಹಿತ್ಯದಲ್ಲಿ ಬಳಸಿಕೊಂಡಿರುವುದನ್ನು ಕಂಡಾಗ, ಅವೆಲ್ಲವುಗಳ ಜ್ಞಾನವನ್ನು ಅವರು ಹೇಗೆ ಪಡೆದುಕೊಂಡರು? ಯಾರಿಂದ ಪಡೆದುಕೊಂಡರು ? ಎಂಬುದು ಅತ್ಯಂತ ವಿಸ್ಮಯದ ವಿಷಯವೆನಿಸುತ್ತದೆ. ಇಂಥವರ ಸಾಲಿನಲ್ಲಿ ಮೂಡಿ ಬಂದವರು ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು.

**ಮನೆತನ :**

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಹುಟ್ಟಿದ್ದು, ಕಲಬುರ್ಗಿ ಜಿಲ್ಲೆಯ ಅಫಜಲಪೂರ ತಾಲೂಕಿನ ದಿಗಸಂಗಿ(ಬಿ) ಎಂಬ ಒಂದು ಚಿಕ್ಕ ಹಳ್ಳಿ. ಸುಮಾರು ಒಂದು ನೂರು ಮನೆಗಳಿರುವ, ಸಾವಿರ ಜನಸಂಖ್ಯೆಯಿರುವ ಊರು. ಜನಪದ ಹಾಡುಗಾರರು, ಭಜನಾ ಮೇಳದವರು, ಹಂತಿ ಹಾಡುಗಾರರು, ಗೀಗೀ ಹಾಡುಗಾರರಿದ್ದ ಈ ಹಳ್ಳಿಯು; ಮುತ್ತಿನಂಥ ಬಿಳಿಜೋಳ, ಗೋದಿ, ಎಳ್ಳು, ತೊಗರಿ, ಕುಸುಬಿ, ಬೆಳೆಯುವ ಫಲವತ್ತಾದ ಎರೆಭೂಮಿಯನ್ನು ಹೊಂದಿದೆ. ಇದ್ದಷ್ಟರಲ್ಲಿಯೇ ಸಂತೋಷಪಡುವ, ಒಕ್ಕಲುತನ ಕೂಲಿನಾಲಿ ಮಾಡುವ ಜನರನ್ನು ಹೊಂದಿದೆ. ಊರಿನ ಹಿಂದುಗಡೆ ಹೆಸರಾಂತ ನದಿ ಅಮರ್ಜಾ ತುಂಬಿ ಹರಿಯುವದು. ಊರಿನ ಸುತ್ತ ಮುತ್ತಲೆಲ್ಲ ಹಲವಾರು ವೃಕ್ಷ ಸಂಪತ್ತು ಬೆಳೆದು ನಿಂತಿರುವುದು. ಕಲಿತವರು ಕಡಿಮೆಯಾದರೂ, ಸಮಯೋಚಿತ ಮನಸ್ಸನ್ನು ಹೊಂದಿದವರು. ಈ ಊರಿನಲ್ಲಿ ಸಾಕಷ್ಟು ಜನರಿದ್ದಾರೆ. ಸದಾ ಪುರಾಣ, ಕಥೆ, ಭಜನೆ ಕೀರ್ತನೆಗಳನ್ನು ಕೇಳುತ್ತಾ ಸಂಸ್ಕಾರ ಬೆಳೆಸಿಕೊಂಡವರು. ಈ ಊರ ಜನ ಶಾಸ್ತ್ರಬದ್ಧವಾಗಿ ಕಲಿಯದೆ ಹಾಡು ಹಾಡುವವರು, ಬರೆಯುವರು, ಓದಲು ಬಾರದೆ ಹಾಡು ರಚಿಸುವರು. ಇಂಥ ಗ್ರಾಮೀಣ ಹಿನ್ನಲೆಯ ಸಮಾಜದಲ್ಲಿ ಜನಿಸಿದವರು ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು.

**ಬಾಲ್ಯ ಶಿಕ್ಷಣ :**

1940 ರ ದಶಕದಲ್ಲಿ ದಿಗಸಂಗಿಯಲ್ಲಿ ಕಲಿತವರೆಂದರೆ ಗೌಡರು, ಕುಲಕರ್ಣಿಯವರು ಮತ್ತು ಊರಿನ ಕೆಲ ಪ್ರಮುಖರು ಮಾತ್ರ. ಆಗ ಕಲಿತವರೆಂದರೆ ಮೋಡಿ, ಮರಾಠಿ, ಉರ್ದು, ಎರಡನೇ ಇಯತ್ತೆ ಕಲಿತವರು ಮಾತ್ರ. ಅದೂ ಗಾಂವಟಿ ಶಾಲೆಯಲ್ಲಿ ಅಷ್ಟು ವಿದ್ಯೆ ಅವರ ಸಂಸಾರಕ್ಕೆ ಸಾಕಾಗುತ್ತಿತ್ತು. ನೌಕರಿ ಮಾಡುವಷ್ಟು ಕಲಿಯಬೇಕಾದರೆ ದೊಡ್ಡ ಪಟ್ಟಣಕ್ಕೆ ಹೋಗಬೇಕಾಗುತ್ತಿತ್ತು. ಅದು ಕೇವಲ ಶ್ರೀಮಂತರಿಗೆ ಮಾತ್ರ ಮೀಸಲಾಗಿತ್ತು. ಹೈದ್ರಾಬಾದ ನಿಜಾಮನ ದರಬಾರಿನಲ್ಲಿ ಕನ್ನಡ ಶಾಲೆಗಳೇ ಇರಲಿಲ್ಲ. ಎಲ್ಲರೂ ಉರ್ದು ಕಲಿಯಬೇಕಾಗುತ್ತಿತ್ತು. ಶ್ರೀ ಸಿದ್ಧರಾಮರ ತಂದೆ, ಅಣ್ಣಂದಿರು ಕಲಿತದ್ದು, ಅದೇ ಉರ್ದು, ಮೋಡಿ, ಮರಾಠಿಯ ಗಾಂವಟಿ ಶಾಲೆಯಲ್ಲೇ.

ಶ್ರೀ ಸಿದ್ಧರಾಮರ ತಂದೆ ಶರಣಪ್ಪನವರು ಊರಿನ ಗೌಡರು. ಊರಿನ ಜನನ ಮರಣ ತಖ್ತೆ ಬರೆಯುವುದು, ಏನಾದರೂ ಜಗಳ, ಕೊಲೆ, ಕೇಸುಗಳಾದರೆ ಪೋಲೀಸರಿಗೆ ವರದಿ ಸಲ್ಲಿಸುವುದು. ಪೋಲೀಸ ಗೌಡರ ಕರ್ತವ್ಯ ಯಾರೇ ಅಧಿಕಾರಿಗಳು ಬರಲಿ, ಪೋಲೀಸರು ಬರಲಿ ಅವರ ಮನೆಯಲ್ಲಿ ಇಳಿದು ಕೊಳ್ಳುವ ವ್ಯವಸ್ಥೆ, ಊಟೋಪಚಾರ ವ್ಯವಸ್ಥೆ ಪೋಲೀಸ ಗೌಡರಿಗೆ ಸಂಬಂಧಪಟ್ಟದ್ದು. ಆಗಿನ ಕಾಲದಲ್ಲಿ ಕಲಿತವರಾದ ಶ್ರೀ ಶರಣಪ್ಪಗೌಡರು ಇಂತಹ ಸರಳ ಸಜ್ಜನಿಕೆಯ ವ್ಯಕ್ತಿ. ಯಾವಾಗಲೂ ರಾಮಾಯಣ, ಮಹಾಭಾರತ ಕಥೆ ಕೇಳುವ ಹವ್ಯಾಸ, ತಾವು ಮರಾಠಿ ಕಲಿತರೂ ಕನ್ನಡ ಬಲ್ಲದವರಾದುದು ಮಹಾಕಾವ್ಯಗಳನ್ನು ಪುರಾಣಗಳನ್ನು ಹೇಳಿಸಿ, ಕೇಳಿ, ಸಂತಸ ಪಡುವ ಸ್ವಭಾವ. ಪ್ರತಿ ಸೋಮವಾರ ಊರ ದೇವಸ್ಥಾನದಲ್ಲಿ ಭಜನೆ ನಡೆಸುವಂತೆ ಮಾಡಿದ್ದರು. ಅಲ್ಲದೆ ಶ್ರಾವಣ ತಿಂಗಳ ಪೂರ್ತಿ ದಿನ ನಿತ್ಯ ಊರ ಕಲ್ಮೇಶ್ವರ ದೇವಸ್ಥಾನದಲ್ಲಿ ಭಜನೆ ನಡೆಸುವುದು ಅದರಲ್ಲಿ ಭಾಗಿಯಾಗುವುದು ಇವರ ಪರಿಪಾಠವಾಗಿತ್ತು. ಹೀಗೆ ಶರಣಪ್ಪ ಗೌಡರೆಂದರೆ ಧಾರ್ಮಿಕ ಸ್ವಭಾವದ ಶರಣ ಸಂಸ್ಕೃತಿಯ ವ್ಯಕ್ತಿಯೆಂದೇ ಹೆಸರಾಗಿದ್ದರು. ಪರ ಊರಿನಿಂದ ಯಾವದೇ ವ್ಯಕ್ತಿ ಬರಲಿ ಅಥವಾ ಅಧಿಕಾರಿಗಳು ಬರಲಿ ಅವರಿಗೆ ಪ್ರಸಾದದ ವ್ಯವಸ್ಥೆ ಇವರ ಮನೆಯಲ್ಲಿಯೇ ಆಗುತ್ತಿತ್ತು. ಶರಣಪ್ಪಗೌಡರ ಧರ್ಮಪತ್ನಿ ಶ್ರೀಮತಿ ತಾರಾಬಾಯಿಯವರು ಪತಿಗೆ ತಕ್ಕ ಸತಿಯಾಗಿ ಬಾಳಿದವರು. ಮನೆಯಲ್ಲಿ ಹತ್ತಾರು ಜಾನುವಾರುಗಳಿಂದ ಕೂಡಿದ ಒಕ್ಕಲುತನದ ಮನೆತನ. ಹಾಲು ಕೊಡುವ

ಎಮ್ಮೆ, ಆಕಳುಗಳು, ಸಾಕಷ್ಟು ಇದ್ದು, ನಿತ್ಯ ಮೊಸರು ಕಡೆದು ಬೆಣ್ಣೆ ತೆಗೆದು ಮಜ್ಜಿಗೆಯನ್ನು ಊರವರಿಗೆಲ್ಲ ಪುಕ್ಕಟ್ಟೆಯಾಗಿ ಹಂಚುವ ಕಾಯಕ ತಾರಾಬಾಯಿ ಗೌಡತಿಯದು. ಮನೆಯಲ್ಲಿ ದುಡಿಯುವ ಆಳುಗಳಿಗೆ ಊಟ, ತಿಂಡಿ, ಬಂದ ಅಥಿತಿಗಳಿಗೆ ಅಡಿಗೆಮಾಡಿ ಹಾಕುವುದು, ಚಹ ಮಾಡಿ ಕುಡಿಸುವುದು. ಹೀಗೆ ಬಿಡುವಿಲ್ಲದ ಕಾರ್ಯಕ್ರಮದ ನಡುವೆಯೂ, ಶರಣರ ಸಂತರ ಪುಣ್ಯ ಪುರುಷರ, ಚರಿತ್ರೆಯನ್ನು ಕೇಳುವ ತವಕ. ಅಷ್ಟೊಂದು ಹೈನಿದ್ದರೂ ಎಂದಿಗೂ ಹಾಲು, ತುಪ್ಪವನ್ನು ಮಾರಿದವರಲ್ಲ. ಎಲ್ಲವೂ ಮನೆ ಮಂದಿಯೇ ಉಣ್ಣಬೇಕು ಹಾಗೂ ಬೇಡಿ ಬಂದವರಿಗೆ ಕೊಡಬೇಕು. ಒಟ್ಟಿನಲ್ಲಿ ಶರಣಪ್ಪಗೌಡರ ಮನೆಯು ಒಂದು ದಾಸೋಹ ಮನೆಯಾಗಿತ್ತು.

ಇಂಥ ಶರಣ ಸಂಪ್ರದಾಯದ ಆಧ್ಯಾತ್ಮ ಮೂಲದ ತಾಯಿ ತಂದೆ ಹಾಗೂ ಸುಸಂಸ್ಕೃತ ಮನೆತನದಲ್ಲಿ ಕೊನೆಯವರಾಗಿ ದಿನಾಂಕ 07.06.1946 ರಂದು ಅಂದರೆ ಮೃಗಾ ಮಿಂಚಿದ ದಿನವೇ ಜನಿಸಿದವರು ಶ್ರೀ ಸಿದ್ಧರಾಮರು. ಇವರಿಗಿಂತ ಹಿರಿಯರಾದ ಮೂವರು ಅಣ್ಣಂದಿರು ಮತ್ತು ಒಬ್ಬ ಅಕ್ಕ ಇದ್ದು, ಶರಣಪ್ಪ ಗೌಡರಿಗೆ ಒಟ್ಟು ಐವರು ( ಪಂಚ ಪಾಂಡವರು. ) ಮಕ್ಕಳು. ತಂದೆ ಹಾಗೂ ಅಣ್ಣಂದಿರೆಲ್ಲ ಮರಾಠಿ, ಮೋಡಿ, ಉರ್ದು ಕಲಿತವರು. ಆದರೆ ಸಿದ್ಧರಾಮರು ಮಾತ್ರ ಕನ್ನಡದಲ್ಲಿಯೇ ವಿದ್ಯಾಭ್ಯಾಸ ಮಾಡಿದ ಪ್ರಥಮರು. ಚಿಕ್ಕವರಿರುವಾಗಿನಿಂದಲೂ ಇವರು ಬಹಳ ಚುರುಕ ಸ್ವಭಾವದವರು. ನಿಜಾಮನ ಪೋಲೀಸರು ಇವರ ಮನೆಗೆ ಬಂದಾಗ, ಚಿಕ್ಕ ಬಾಲಕನಾದ ಸಿದ್ಧರಾಮನನ್ನು ಎತ್ತಿಕೊಂಡು ಮುದ್ದಾಡುತ್ತಿದ್ದರು. ಏಕೆಂದರೆ ಇವರು ಉರ್ದುವಿನ ಅಕ್ಷರಗಳಾದ ಅಲಿ, ಬೇ ಪೇ, ತೇ, ಲೇ ಸೇ ಎಂದು ಮುಂತಾದವುಗಳನ್ನು ಬಾಯಿಪಾಠವಾಗಿ ಹೇಳುತ್ತಿದ್ದರು. ಹಿಂದಿ ಶಬ್ದಗಳನ್ನು ಉಚ್ಚರಿಸುತ್ತಿದ್ದರು. ಇದನ್ನು ಕಂಡು ಅವರಿಗೆ ಎಲ್ಲಿಲ್ಲದ ಸಂತೋಷವಾಗುತ್ತಿತ್ತು. ಆದರೆ ಮುಂದೆ ಇವರೇ ಒಬ್ಬ ಕನ್ನಡದ ಮಹಾನ ಕವಿಯಾಗುವನೆಂಬುದು ಯಾರಿಗೂ ತಿಳಿದಿರಲಿಲ್ಲ. ಬಾಲ್ಯದಲ್ಲಿ ಸಿದ್ಧರಾಮರಿಗೆ ಆಟ, ಪಾಠಗಳಲ್ಲಿ ಬಹಳ ಆಸಕ್ತಿ. ಆವಾಗಿನ ಆಟಗಳಾದ ಗೋಲಿಗುಂಡು, ಬಿಲ್ಲು-ಬಾಣ, ಬುಗುರಿ, ಚಿಣ್ಣಿದಾಂಡು, ಖೋ ಖೋ, ಕಬ್ಬಡ್ಡಿ, ಮರಮಂಗನಾಟ ಹೀಗೆ ಹಲವಾರು ಜಾನಪದ ಆಟಗಳನ್ನು ಆಡುವುದೆಂದರೆ ಇವರಿಗೆ ಬಹಳ ಖುಷಿ. ಆಟದಲ್ಲಿ ಸದಾ ಎಲ್ಲರಿಗಿಂತ ಮುಂದೆ ಇರುತ್ತಿದ್ದರು. ಬಿಲ್ಲು ಬಾಣದ ಆಟದಲ್ಲಿ ನಿಖರವಾಗಿ ಗುರಿಯಿಟ್ಟು ಹೊಡೆಯುವರಲ್ಲಿ ಬಹಳ ನಿಪುಣತೆ ಇದ್ದಿತು.

ಚಿಕ್ಕವರಿರುವಾಗಲೇ ಇವರಿಗೆ ದೇವರಲ್ಲಿ ಭಕ್ತಿ ನಂಬಿಕೆ, ಗಾಢವಾಗಿದ್ದಿತು. ದಿನಾಲೂ ದೇವರ ಪೂಜೆ ಮಾಡದೆ ಒಂದು ಹನಿ ನೀರು ಕೂಡ ಬಾಯಲ್ಲಿ ಹಾಕುತ್ತಿರಲಿಲ್ಲ. ಮನೆಯ ದೇವರಾದ ಕಾಡಸಿದ್ಧನಲ್ಲಿ ಅಪಾರ ಭಕ್ತಿ. ಅಲ್ಲದೆ ಊರ ಹೊರಗಿರುವ ಲಕ್ಷ್ಮೀ ದೇವಸ್ಥಾನಕ್ಕೆ ಪ್ರತಿ ಶುಕ್ರವಾರ ತಪ್ಪದೆ ಬರಿಗಾಲಲ್ಲಿ ಹೋಗಿ, ನೈವೇದ್ಯ ಅರ್ಪಿಸಿ, ನಮಸ್ಕರಿಸಿ ಬರುತ್ತಿದ್ದರು. ಕೀರ್ತನೆ, ಪುರಾಣ ಕೇಳುವುದೆಂದರೆ ಹೆಚ್ಚು ಶೃದ್ಧೆ. ಆಧ್ಯಾತ್ಮವೆಂಬುದು ಇವರಿಗೆ ಹುಟ್ಟಿನಿಂದಲೂ ಬಂದದ್ದು.

ಹಳ್ಳಿಗಳಲ್ಲಿ 40 ರ ದಶಕದಲ್ಲಿ ಸರಕಾರಿ ಶಾಲೆಗಳೇ ಇರಲಿಲ್ಲ. ಗಾಂವಟಿ ಶಾಲೆಗಳಲ್ಲಿ ಕೇವಲ ಮರಾಠಿ, ಉರ್ದು ಕಲಿಸಲಾಗುತ್ತಿತು. ಆದರೆ ಸಿದ್ಧರಾಮರ ಪುಣ್ಯವೋ ಅಥವಾ ಕನ್ನಡ ಭಾಷೆಯ ಪುಣ್ಯವೋ, ಇವರು ಶಾಲೆಗೆ ಸೇರುವ ಹೊತ್ತಿಗೆ ದಿಗಸಂಗಿಯಲ್ಲೊಂದು ವ್ಹಾಲೆಂಟರಿ ಶಾಲೆ ಪ್ರಾರಂಭವಾಗಿತ್ತು. ಅದಕ್ಕೊಬ್ಬ ಪ್ರೈವೇಟ ಶಿಕ್ಷಕ. ಆತನಿಗೆ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ಎರಡೆರಡು ರೂಪಾಯಿ ವಸೂಲಿ ಮಾಡಿ, ಪಗಾರ ಮಾಡಲಾಗುತ್ತಿತ್ತು. ಪ್ರಪ್ರಥಮ ಕನ್ನಡ ಶಾಲೆಯಲ್ಲಿ ಸಿದ್ಧರಾಮರು ಒಂದನೆ ಮತ್ತು ಎರಡನೇ ಇಯತ್ತೆಯ ವರೆಗೆ ಓದಿದರು. ಇವರ ಊರಲ್ಲಿ ಇದ್ದುದು ಇಷ್ಟೇ. ಅಭ್ಯಾಸ ಮುಂದುವರಿಯಬೇಕಾದರೆ ಬೇರೆ ಊರಿಗೆ ಹೋಗಬೇಕಾಗುತ್ತಿತ್ತು. ಎರಡನೇ ವರ್ಗದಲ್ಲಿರುವಾಗಲೇ ಗಣಿತ ಲೆಕ್ಕದಲ್ಲಿ ಸಿದ್ಧರಾಮರು ಬಹಳ ಚುರುಕರೆಂದೇ ಹೆಸರಾಗಿದ್ದರು. 30 ರ ವರೆಗೆ ಮಗ್ಗಿಯನ್ನು ಬಾಯಿಪಾಠವಾಗಿ ಹೇಳುತ್ತಿದ್ದರು. ಕನ್ನಡದಲ್ಲಿ ಪ್ರಬಂಧ ಬರೆಯುವುದನ್ನು ಕಲಿತಿದ್ದರು. ಎಲ್ಲ ಹುಡುಗರಲ್ಲಿ ಈತ ಇಂದಿಲ್ಲ ನಾಳೆ ದೊಡ್ಡ ವ್ಯಕ್ತಿಯಾಗುವನೆಂದು ಶಿಕ್ಷಕರು ಇವರ ತಂದೆಗೆ ಹೇಳಿದ್ದರಂತೆ. ಹೀಗಾಗಿ ತಂದೆಯವರು ಈತನನ್ನು ಮುಂದೆ ಓದಿಸಬೇಕೆಂದು ನಿರ್ಧರಿಸಿದರು. ದಿಗಸಂಗಿಯಿಂದ ನಾಲ್ಕು ಮೈಲು ದೂರವಿರುವ ಬೈರಾಮಡಗಿಗೆ 3ನೇ ವರ್ಗಕ್ಕೆ ಸೇರಿಸಿದರು. ಅಲ್ಲಿ 3ನೇ ಹಾಗೂ 4ನೇ ಕ್ಲಾಸುಗಳಿದ್ದವು. ಅಲ್ಲದೆ ಅದು ಸರಕಾರಿ ಶಾಲೆಯಾಗಿತ್ತು. ದಿನಾಲೂ ಬುತ್ತಿ ಕಟ್ಟಿಕೊಂಡು ಉಳಿದ ಸಂಗಡಿಗರೊಂದಿಗೆ ಹೋಗಿ ಬಂದುಮಾಡುತ್ತಲೇ ನಾಲ್ಕನೇ ವರ್ಗದಲ್ಲಿ ಶಾಲೆಗೆ ಪ್ರಥಮವಾಗಿ ಪಾಸಾದರು. ನಂತರ ಮತ್ತೆ ಮುಂದಿನ ಅಭ್ಯಾಸಕ್ಕಾಗಿ ಮತ್ತೊಂದು ಊರಿಗೆ ಪ್ರಯಾಣ, ಅದು ಗೊಬ್ಬೂರು (ಬಿ) ಗ್ರಾಮ. ಅದು ದಿಗಸಂಗಿಯಿಂದ ಐದಾರು ಮೈಲು ದೂರವಿದ್ದು, ಏಳನೇ ವರ್ಗದವರೆಗೆ ಮಾತ್ರ ಅಭ್ಯಾಸವಿತ್ತು. ಅಲ್ಲಿ ಕೂಡ ಸಿದ್ಧರಾಮರು ಮನೆಯಿಂದ ತಂದ ಬುತ್ತಿ ಊಟ ಮಾಡುತ್ತಾ, ಶಾಲೆಯಲ್ಲಿಯೇ ರಾತ್ರಿ

ಮಲಗುತ್ತಿದ್ದರು. ಇಡೀ ಅಫಜಲಪೂರ ತಾಲೂಕಿಗೆ ಪ್ರಥಮರಾಗಿ ತೇರ್ಗಡೆಯಾದರು. ನಂತರ ಮತ್ತೆ ಮುಂದೆ ಪ್ರಯಾಣ. 1958-59 ರ ಸುಮಾರಿಗೆ ಕಲಬುರ್ಗಿಗೆ ಬಂದು, ಶ್ರೀ ಶರಣಬಸವೇಶ್ವರ ಪ್ರೌಢ ಶಾಲೆಗೆ ಸೇರ್ಪಡೆಯಾದರು. ಶಾಲೆಯ ಪ್ರತಿಯೊಂದು ಸ್ಪರ್ಧೆಯಲ್ಲಿ ಇವರದೇ ಪ್ರಥಮ ದರ್ಜೆ. ಲೆಕ್ಕದಲ್ಲಿ ನೂರಕ್ಕೆ ನೂರು ಅಂಕ. ಕನ್ನಡ ಭಾಷೆಯಲ್ಲಿ ತಪ್ಪಿಲ್ಲದ, ವ್ಯಾಕರಣ ಬದ್ಧವಾದ ಬರವಣಿಗೆ. ಇಂಗ್ಲೀಷಿನಲ್ಲಿ ಲೇಖನ ಬರೆಯುವುದು. ಅಲ್ಲಿನ ಶಿಕ್ಷಕ ವರ್ಗಕ್ಕೆ ಇವರನ್ನು ಕಂಡರೆ ಎಲ್ಲಿಲ್ಲದ ಪ್ರೀತಿ, ಕಾಳಜಿ. ಹೀಗಾಗಿಯೇ ಎಚ್. ಎಸ್.ಸಿ. ಎಮ್. ಪಿ ಬೋರ್ಡು ಪರೀಕ್ಷೆಯಲ್ಲಿ ರಾಜ್ಯಕ್ಕೆ ಪ್ರಥಮರಾಗಿ ಪಾಸಾದರು. ಅಲ್ಲದೆ ಪ್ರಥಮ ರ್‍ಯಾಂಕ ಪಡೆದವರಿಗೆ ದೊರಕುವ **"ಶ್ರೀ ರಘೋಜಿ ಗೋಲ್ಡ ಮೆಡಲ್"** 1963-64 ರಲ್ಲಿ ಇವರ ಪಾಲಾಗಿತ್ತು.

ಪ್ರಥಮ ರ್‍ಯಾಂಕ ಬಂದದ್ದೇ ತಡ ಇಂಜಿನಿಯರಿಂಗ ಕಾಲೇಜಿಗೆ ಸುಲಭವಾಗಿ ಆಯ್ಕೆಯಾಗಿ ಗುಲಬರ್ಗಾದ ಎಚ್.ಕೆ. ಇ. ಯ ಇಂಜನಿಯರಿಂಗ್ ಕಾಲೇಜಿಗೆ ಸೇರಿದರು. 1969 ರಲ್ಲಿ ಬಿ.ಇ. ಡಿಗ್ರಿಯನ್ನು ಆನರ್ಸದೊಂದಿಗೆ ತೆಗೆದುಕೊಂಡರು.

**ಸಾಹಿತ್ಯಕ ಹಿನ್ನೆಲೆ ಹಾಗೂ ಪರಿಸರ :**

ಶ್ರೀ ಸಿದ್ಧರಾಮರ ತಂದೆಗೆ ಪುರಾಣ, ಪುಣ್ಯ ಕಥೆಗಳನ್ನು ಕೇಳುವುದೆಂದರೆ ಬಹಳ ಹಿಗ್ಗು. ಸಿದ್ಧರಾಮರು ನಾಲ್ಕನೇ ವರ್ಗದಲ್ಲಿ ಓದುತ್ತಿರುವಾಗಲೇ ರಾಮಾಯಣ, ಮಹಾಭಾರತದ ಗದ್ಯ ಕೃತಿಗಳನ್ನು ಓದಲು ಹಚ್ಚಿದವರು ತಂದೆ ಶರಣಪ್ಪ ಗೌಡರು ಈತ ಓದಬೇಕು; ಅವರು ಕುಳಿತು ಕೇಳಬೇಕು. ಕಥೆಯನ್ನು ಕೇಳಲು ಊರಿನ ಅನೇಕ ಹಿರಿಯರು ಬರುತ್ತಿದ್ದರು. ಇವರದು ಒಂದು ಕಿರಾಣಿ ಅಂಗಡಿ ಇತ್ತು . ಅದರ ಮುಂದೆ ಚಾಪೆ ಹಾಸಿಕೊಂಡು ಕುಳಿತು ಇವರು ಕಥೆಗಳನ್ನು ಓದುತ್ತಿದ್ದರೆ ಉಳಿದವರು ಕೇಳುತ್ತಿದ್ದರು. ದಿನಾಲೂ ಒಂದೊಂದು ಸಂಧಿಗಳನ್ನು ಓದಲಾಗುತ್ತಿತ್ತು. ಆವಾಗಲೇ ಇವರಿಗೆ ಓದುವ ಚಟ ಅಂಟಿಕೊಂಡದ್ದು. ಶಬ್ದಗಳ ಸ್ಪಷ್ಟ ಉಚ್ಚಾರ, ನಿರ್ಗಳವಾದ ಓದು. ಇವರದೇ ಆದ ಒಂದು ವಿಶಿಷ್ಟ ಓದುವ ಶೈಲಿ ಇದ್ದುದ್ದರಿಂದ ಊರವರೆಲ್ಲ ಇವರಿಗೆ ಕಥೆ ಓದಿ ಹೇಳಲು ಗಂಟು ಬೀಳುತ್ತಿದ್ದರು. ಕಲಬುರ್ಗಿಗೆ ಓದಲು ಬಂದಾಗಲಂತೂ ಲೈಬ್ರೆರಿಯಿಂದ ಹೊಸ ಹೊಸ ಕಥೆಗಳ ಪುಸ್ತಕಗಳನ್ನು ತೆಗೆದುಕೊಂಡು ಹೋಗಿ, ರಜೆ ದಿನಗಳಲ್ಲಿ ಊರವರಿಗೆ ಓದಿ

ಹೇಳುತ್ತಿದ್ದರು. ಹೈಸ್ಕೂಲಿನಲ್ಲಿ ಕೂಡ ಪಠ್ಯ ಪುಸ್ತಕಗಳನ್ನಲ್ಲದೇ ಲೈಬ್ರೆರಿಯಿಂದ ಹಿರಿಯ ಸಾಹಿತಿಗಳ ಕೃತಿಗಳನ್ನು ತೆಗೆದುಕೊಂಡು ಓದುತ್ತಿದ್ದರು.

ಹೀಗೆ ತಂದೆಯ ಕಥೆ ಕೇಳುವ ಉತ್ತಮ ಹವ್ಯಾಸ, ಊರವರ ಪ್ರೇರಣೆ, ಪ್ರೋತ್ಸಾಹಗಳು, ಇವರು ಕನ್ನಡ ಸಾಹಿತ್ಯದಲ್ಲಿ ಒಲವು ತೋರಲು ಕಾರಣಗಳಾದವು. ಮತ್ತು ಸಹಕಾರವಾಯಿತೆಂದು ಹೇಳಬಹುದು. ಅಲ್ಲದೆ ಹೈಸ್ಕೂಲಿನಲ್ಲಿ ಕತೆ, ಕವನ, ಪ್ರಬಂಧ ಸ್ಪರ್ಧೆಗಳನ್ನು ಏರ್ಪಡಿಸುತ್ತಿದ್ದುದರಿಂದ ಅದರಲ್ಲಿ ಭಾಗವಹಿಸುತ್ತಲೇ ಇವರಲ್ಲಿ ಸಾಹಿತ್ಯದ ಚಿಗುರೊಡೆಯಿತು. ಜತೆಗೆ ಗುರುಗಳಾದ ಶ್ರೀ ಪ್ರಭುಲಿಂಗಯ್ಯಾ ಮಲ್ಲಾಪುರರಂಥವರ ಮಾರ್ಗದರ್ಶನದಲ್ಲಿ ಸಿದ್ಧರಾಮರು 8ನೇ ವರ್ಗದಲ್ಲಿರುವಾಗಲೇ ಕಥೆ, ಕವನ, ಪ್ರಬಂಧಗಳನ್ನು ಬರೆಯತೊಡಗಿದರು. ಹೈಸ್ಕೂಲಿನ ವಾರ್ಷಿಕ ಸ್ಮರಣ ಸಂಚಿಕೆಯಲ್ಲಿ ಲೇಖನ, ಕವನಗಳನ್ನು ಪ್ರಕಟಿಸುವ ಮೂಲಕ ಇವರಿಗೆ ಇನ್ನೂ ಹೆಚ್ಚಿನ ಪ್ರೋತ್ಸಾಹ ದೊರಕಿತು.

ಇವರು ಅನೇಕ ಕಥೆ, ಕವನ, ಹರಟೆಗಳು ಶ್ರೀ ಶರಣ ಬಸವೇಶ್ವರ ಪ್ರೌಢ ಶಾಲೆಯ 'ಹೂಗೊಂಚಲು' ಎಂಬ ವಾರ್ಷಿಕ ಸಂಚಿಕೆಯಲ್ಲಿ ಆವಾಗಲೇ ಅಂದರೆ 1959-60 ರಲ್ಲಿಯೇ ಪ್ರಕಟವಾಗಿದ್ದನ್ನು ಕಾಣಬಹುದಾಗಿದೆ. ಪಠ್ಯೇತರ ಪುಸ್ತಕಗಳ ಹೆಚ್ಚಿನ ಓದು ಸಿದ್ಧರಾಮರಿಗೆ ಸಾಹಿತಿಯಾಗಲು ಪ್ರೇರೇಪಿಸಿತು. ಹೈಸ್ಕೂಲಿನಲ್ಲಿ ಸಮರ್ಥ ಗುರುಗಳ ಮಾರ್ಗದರ್ಶನದಿಂದ ಕನ್ನಡ ವ್ಯಾಕರಣ, ಛಂದಸ್ಸು, ಅಲಂಕಾರ, ಪ್ರಾಸ, ಒಳಪ್ರಾಸ, ಅಂತ್ಯಪ್ರಾಸ, ಅಂಶಗಣ, ಮಾತ್ರಗಣಗಳ ಸಂಪೂರ್ಣ ಜ್ಞಾನ ದೊರೆಯಿತು. ಅದರಿಂದಾಗಿ ಸಿದ್ಧರಾಮರಿಗೆ ಕವನ ಕಟ್ಟಲು ಸುಲಭವಾಯಿತು. ತ್ರಿಪದಿ, ಷಟ್ಪದಿ, ಚತುಷ್ಪದಿ, ಭಾವಗೀತೆ, ಮುಂತಾದ ಪ್ರಕಾರಗಳಲ್ಲಿ ಪ್ರಾವೀಣ್ಯ ಪಡೆದರು. ಅವರ ಈ ಕಾವ್ಯ ಕಟ್ಟುವ ಕ್ರಿಯೆ ಮುಂದೆ ಇಂಜೀನಿಯರಿಂಗ ಸೇರಿದರೂ ಬಿಡದೆ, ಮುಂದುವರರೆಯಿತು. ಇಂಜೀನಿಯರಿಂಗ ಕಾಲೇಜಿನ ಮ್ಯಾಗಝೀನಗಳಲ್ಲಿ ಇವರ ಕಥೆ, ಹರಟೆ, ಕವನಗಳು, ಪ್ರತಿ ವರ್ಷ ಪ್ರಕಟಗೊಳ್ಳುತ್ತಿದ್ದವು. ಇಂಜೀನಿಯರಿಂಗ ಮುಗಿಸಿ ಸರಕಾರಿ ನೌಕರಿ ಸೇರಿದರೂ ಶಾರದೆಯನ್ನು ಹಿಂದಕ್ಕೆ ತಳ್ಳದೇ ತಮ್ಮ ತೆಕ್ಕೆಗೆ ತೆಗೆದುಕೊಂಡರು.

## ವೃತ್ತಿ -ಪ್ರವೃತ್ತಿ :

'ಎತ್ತಣ ಮಾಮರ, ಎತ್ತಣ ಕೋಗಿಲೆ ಎತ್ತನಿಂದೆತ್ತ ಸಂಬಂಧವಯ್ಯ', ಎನ್ನುವ ವಚನದಂತೆ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಎಚ್. ಎಸ್.ಸಿ ಎಂ.ಪಿ.ಯಲ್ಲಿ ರಾಜ್ಯಕ್ಕೆ ಪ್ರಥಮ ರ್‍ಯಾಂಕ ಬಂದಾಗ, ಅವರಿಗೆ ವೈದ್ಯರಾಗಬೇಕೆಂಬ ಹಂಬಲವಿತ್ತು. ಅವರ ಒಬ್ಬ ಅಣ್ಣ ಹಳ್ಳಿಯಲ್ಲಿ ಆರ್. ಎಮ್.ಪಿ. ವೈದ್ಯರಾಗಿ ಸೇವೆ ಸಲ್ಲಿಸುತ್ತಿದ್ದು. ಅವರ ಸಂಪರ್ಕದಿಂದ ಆಗಲೇ ಸಿದ್ಧರಾಮರು ವೈದ್ಯಕೀಯ ಅನುಭವ ಪಡೆದಿದ್ದರು. ಹೀಗಾಗಿ ವೈದ್ಯ ಕೋರ್ಸಿಗೆ ಅನುಭವಗಳ ಸೇರಿದರೆ ಸುಲಭವಾಗುವುದೆಂಬ ನಂಬಿಕೆಯಿತ್ತು. ಪ್ರಥಮ ರ್‍ಯಾಂಕ ಬಂದದ್ದರಿಂದ ಸೀಟು ಪುಕ್ಕಟೆಯಾಗಿ ಸಿಗುತ್ತಿತ್ತು. ಆದರೆ ದುರ್ದೈವವೆಂದರೆ 1964 ರಲ್ಲಿ ಗುಲಬರ್ಗಾ ಎಚ್.ಕೆ. ಇ. ಸಂಸ್ಥೆಯ ಮೆಡಿಕಲ್ ಕಾಲೇಜಿನಲ್ಲಿ ಮೆರಿಟ ಸೀಟ್ ಇರಲಿಲ್ಲ.

ಎಲ್ಲವೂ ಡೊನೇಶನ ಸೀಟುಗಳಿದ್ದವು. ಮೆರೀಟ ಸೀಟುಗಳಿಸಿಕೊಂಡವರು ಬಳ್ಳಾರಿಗೋ ಅಥವಾ ಹುಬ್ಬಳ್ಳಿಗೋ ಹೋಗಬೇಕಾಗುತ್ತಿತ್ತು. ಹಳ್ಳಿಯಿಂದ ಬಂದಿದ್ದ ಮಧ್ಯಮ ವರ್ಗದ ಒಕ್ಕಲುತನ ಮನೆತನದ ವ್ಯಕ್ತಿ ಅಷ್ಟು ದೂರಕ್ಕೆ ಹೋಗಿ ಖರ್ಚು ನಿಭಾಯಿಸುವುದು ಸಾಧ್ಯವಿರಲಿಲ್ಲ. ಹೀಗಾಗಿ ಆ ಆಸೆಯನ್ನು ಅಷ್ಟಕ್ಕೆ ಬಿಟ್ಟು ಯಾವುದಾದರೂ ನೌಕರಿ ಸೇರಬೇಕೆಂಬ ಹಂಬಲದಲ್ಲಿದ್ದರು. ಆಗ ಇವರ ಸಂಬಂಧಿಕರೊಬ್ಬರು ಇಂಜೀನಿಯರಿಂಗ ಸೀಟಿಗೆ ಆರ್ಜಿ ಸಲ್ಲಿಸಿದರು. ಇಂಟರವ್ಯೂ ಬಂದಿತು. ಸಲೆಕ್ಷೂ ಆಯಿತು. ಹಿರಿಯರ ಒತ್ತಾಯದಿಂದ, ಒಲ್ಲದ ಮನಸ್ಸಿನಿಂದ ಇಂಜೀನಿಯರಿಂಗಿಗೆ ಸೇರಿ ಐದು ವರ್ಷಗಳಲ್ಲಿ ಅಂದರೆ 1969 ರಲ್ಲಿ ಇಂಜೀನಿಯರಿಂಗ ಡಿಗ್ರಿ ಪಡೆದುಕೊಂಡರು. ಮುಂದೆ ಹಲವಾರು ತೊಂದರೆಗಳನ್ನು ಅನುಭವಿಸಿ ಹಾಗೂ ಹೀಗೂ ಇಂಜೀನಿಯರಿಂಗ್ ನೌಕರಿ ಸೇರಿಕೊಂಡರು.

ಯಾವಾಗ ಇಂಜನೀಯರಿಂಗ್ ಕೋರ್ಸಿಗೆ ಸೇರಿಕೊಂಡರೋ ಆಗಲೇ ಇವರ ಕ್ಷೇತ್ರ ಬದಲಾಯಿತು. ಸಾಹಿತ್ಯದತ್ತ ಒಲವಿದ್ದ ಇವರು ಒತ್ತಾಯದಿಂದ ಇಂಜೀನಿಯರ್ ಆದರು. ಆದರೆ ಅವರ ಒಳಗೆ ಅಡಗಿದ್ದ ಆ ಶಾರದಾ ದೇವಿ ಇವರನ್ನು ತೊರೆಯಲಿಲ್ಲ. ಆಗಾಗ ಕಾಡುತ್ತಲೇ ಇದ್ದಳು. ಅಭ್ಯಾಸ ಮಾಡುವಾಗ ಸಹಿತ, ಹಲವಾರು ಕನ್ನಡ ಗ್ರಂಥಗಳನ್ನು ಓದುವುದು, ಲೇಖನ, ಕವನಗಳನ್ನು ಬರೆಯುವುದು, ಮುಂದುವರೆಸಿದರು. ಆಗಲೇ ಸಾವಿರಾರು ವಚನಗಳನ್ನು ಬರೆದರು. ಕಾಲೇಜಿನ

ಬಿಡುವಿಲ್ಲದ ಅಭ್ಯಾಸ, ಪ್ರ್ಯಾಕ್ಟಿಕಲ್ ಮುಂತಾದವುಗಳ ಕಠಿಣ ಸಂದರ್ಭದಲ್ಲಿ ಕೂಡ ಇವರು ತಮ್ಮ ಮನ ಶಾಂತಿಗಾಗಿ ಸಾಹಿತ್ಯದ ಸಂಗವನ್ನು ಬಲವಾಗಿ ಅಂಟಿಕೊಂಡರು. ಬಾಲ್ಯದಿಂದಲೇ ಬೆನ್ನು ಹತ್ತಿ ಬಂದ ಆ ಹವ್ಯಾಸವನ್ನು ಬಿಡಲು ಹೇಗೆ ಸಾಧ್ಯ ? ಕಷ್ಟ ಬಂದಾಗ, ಕಷ್ಟವನ್ನು ಕವನದ ರೂಪದಲ್ಲಿ ಇಳಿಸಿದರು. ಹೀಗಾದಾಗ ಅದನ್ನು ಲೇಖನವಾಗಿಸಿದರು. ಇವರ ಕವನ ಸಂಕಲನ ಹಾಗೂ ಪ್ರಬಂಧಗಳನ್ನು ಓದಿದಾಗ ಅವರ ಮನಸ್ಸಿನ ಈ ಹೊಯ್ದಾಟವನ್ನು ಗಮನಿಸಬಹುದಾಗಿದ. ಹೇಗೋ ನೌಕರಿ ಗಿಟ್ಟಿಸಿಕೊಂಡ ಮೇಲೆ ಇವರ ಜೀವನ ಸ್ವಲ್ಪ ನಿರಾಳವಾಯಿತು. ಚಿಂತೆ ಕಷ್ಟಗಳು ದೂರವಾದವು. ಹೀಗಾಗಿ ಸಾಹಿತ್ಯದ ಕಡೆ ಒಲುವು ಇನ್ನೂ ಹೆಚ್ಚಾಯಿತು. ವೃತ್ತಿ ಬೇರೆಯಾದರೂ ತಮ್ಮ ಮೂಲ ಪ್ರವೃತ್ತಿಯನ್ನು ಇವರು ಮುಂದುವರೆಸಿಕೊಂಡು ಹೋದರು. 1975 ರಲ್ಲಿ ಇವರು ರಾಯಚೂರಿನ ಹತ್ತಿರವಿರುವ ಯರಮರಸ್ ಕ್ಯಾಂಪಿನಲ್ಲಿ ತುಂಗಭದ್ರಾ ಪ್ರೊಜೆಕ್ಟ್ ನಲ್ಲಿ ಇಂಜೀನಿಯರ್ ಎಂದು ಸೇವೆ ಸಲ್ಲಿಸುತ್ತಿರುವಾಗ, ಸಹಜವಾಗಿಯೇ ಶ್ರೀ ಶಾಂತರಸರ ಪರಿಚಯವಾಯಿತು. ಇವರ ತ್ರಿಪದಿ, ಕವನ, ಲೇಖನಗಳನ್ನು ತರಿಸಿಕೊಂಡು ಓದಿದ ಶಾಂತರಸರಿಗೆ ಆಶ್ಚರ್ಯವಾಯಿತು. ಒಬ್ಬ ಇಂಜೀನಿಯರರಾಗಿ ಇಷ್ಟೊಂದು ಸಾಹಿತ್ಯ ರಚನೆ ಮಾಡಿದ್ದು, ಅವರಿಗೆ ಹೆಮ್ಮೆ ಎನಿಸಿತು. ಇಷ್ಟೆಲ್ಲಾ ಬರೆದು ಮೂಲೆಯಲ್ಲಿ ಇಟ್ಟುಕೊಂಡರೆ ಉಪಯೋಗವಿಲ್ಲ. ನಿಮ್ಮ ವಿಚಾರಗಳು ಜನರಿಗೆ ತಲುಪಬೇಕು. ಅದಕ್ಕಾಗಿ ಸದ್ಯಕ್ಕೆ ಒಂದು ಚಿಕ್ಕ ಕವನ ಸಂಕಲನ ಹೊರ ತರಬೇಕು ಎಂದು ತಿಳಿಸಿ ಹೇಳಿದರು. ಅವರೇ ಸ್ವತಃ ಕೆಲವೊಂದು ಕವನಗಳನ್ನು ಆಯ್ಕೆ ಮಾಡಿ ಒಂದು ಕವನ ಸಂಕಲನ ಸಿದ್ಧಗೊಳಿಸಿದರು. ಅದೇ ಇವರ ಪ್ರಥಮ ಕವನ ಸಂಕಲನ ''ನಾನು ನಮ್ಮಪ್ಪನ್ನಾಂಗs'' 1978 ರಲ್ಲಿ ರಾಯಚೂರಿನಲ್ಲಿ ಬಿಡುಗಡೆಯಾಗಿ, ಸಿದ್ಧರಾಮರು ಸಾಹಿತಿಗಳ ಬಳಗಕ್ಕೆ ಸೇರಿಕೊಂಡರು. ಅಂದಿನಿಂದ ಇಂದಿನವರೆಗೆ ಅವರು ಬರೆಯುತ್ತಲೇ ಇದ್ದಾರೆ. ಮೂರ್‍ನಾಲ್ಕು ವರ್ಷಕ್ಕೆ ಒಂದರಂತೆ ಪುಸ್ತಕಗಳನ್ನು ಪ್ರಕಟಿಸುತ್ತಲೇ ಬಂದಿದ್ದಾರೆ.

ಕೆಲವು ವರ್ಷಗಳ ನಂತರ ಇವರು ರಾಯಚೂರಿನಿಂದ ಕಲಬುರ್ಗಿಗೆ ವರ್ಗವಾಗಿ ಬಂದ ನಂತರವಂತೂ, ಇವರ ಸಾಹಿತ್ಯಿಕ ಚಟುವಟಿಕೆಗಳಿಗೆ ಹೆಚ್ಚಿನ ಬೆಂಬಲ ದೊರಕಿತು. ಬಸವ ತತ್ವ ಪ್ರಸಾರ ಸಮಿತಿ, ಸಾಹಿತ್ಯ ಪರಿಷತ್ತು, ಸಾಹಿತ್ಯ ಸಂಘ ಹೀಗೆ ಹಲವಾರು ಕಡೆ ಇವರು ಸಕ್ರಿಯವಾಗಿ ಭಾಗವಹಿಸಿ, ಅನೇಕ ಪುಸ್ತಕಗಳನ್ನು ಹೊರ ತಂದರು. ಗುಲಬರ್ಗಾದ ತುಂಬೆಲ್ಲ ಇವರು

''ಇಂಜೀನಿಯರಿಂಗ ಕಮ್ ಕವಿ'' ಎಂದೇ ಹೆಸರು ಪಡೆದರು. ಗುಲಬರ್ಗಾದಲ್ಲಿ ಎಲ್ಲಿಯೇ ಕವಿಗೋಷ್ಠಿ ನಡೆಯಲಿ ಸಾಹಿತ್ಯಕ ಕಾರ್ಯಕ್ರಮವಿರಲಿ, ಅಲ್ಲಿ ಇವರು ಹಾಜರಿ ಖಾತ್ರಿ. ಗುಲಬರ್ಗಾದ ಹೆಸರಾಂತ ಕವಿಗಳಲ್ಲಿ ಇವರ ಹೆಸರು ಸೇರಿಕೊಂಡಿದೆ. ಆಕಾಶವಾಣಿ, ದೂರದರ್ಶನಗಳ ಕವಿಗೋಷ್ಠಿಯಲ್ಲಿ ಇವರ ಹೆಸರು ತಪ್ಪದೇ ಇರುತ್ತದೆ. ಅದರಲ್ಲಿ ಹಾಸ್ಯ ಕವಿಗೋಷ್ಟಿಗೆ ಹೆಸರಿಸುವಾಗ, ಸಿದ್ಧರಾಮ ಪೋಲೀಸ ಪಾಟೀಲರ ಹೆಸರು ಮೊದಲು ನೆನಪಿಗೆ ಬರುತ್ತದೆ. ಆಕಾಶವಾಣಿಯಲ್ಲಿ ಇವರ ಹಾಸ್ಯ ಲೇಖನಗಳು ಪ್ರಸಾರವಾಗುತ್ತಲೇ ಇರುತ್ತವೆ. ಎಂಥದೆ ಕಚೇರಿ ಕೆಲಸವಿದ್ದರೂ ಕೂಡ ಸಾಹಿತ್ಯಿಕ ಕಾರ್ಯಕ್ರಮಗಳನ್ನು ತಪ್ಪಿಸುತ್ತಿರಲಿಲ್ಲ. ಹೇಗಾದರೂ ಹೊಂದಾಣಿಕೆ ಮಾಡಿಕೊಂಡು, ಇಲ್ಲವೆ ಕಡೆಗೆ ರಜೆ ಹಾಕಿಯಾದರೂ ಅಂಥ ಕಾರ್ಯಕ್ರಮಗಳಿಗೆ ಹಾಜರಾಗುತ್ತಿದ್ದರು. ಇದು ಅವರ ಸಾಹಿತ್ಯದಲ್ಲಿಟ್ಟ ಅಪಾರ ಅಭಿಮಾನ ಹಾಗೂ ಅಭಿರುಚಿ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಇಲ್ಲಿಯವರೆಗೆ ಸಿದ್ಧರಾಮ ಪೋಲೀಸ ಪಾಟೀಲರ ಪ್ರವೃತ್ತಿ ಬಗ್ಗೆ ಹೇಳಲಾಯಿತು. ಆದರೆ ಅವರ ವೃತ್ತಿ ಬಗ್ಗೆ ಹೇಳಬೇಕೆಂದರೆ ಅದೊಂದು ಅಪರೂಪದ ಕಥೆಯಾಗಿದೆ. ಇವರು ಇಂಜೀನಿಯರ ಆದರೂ ಸರಳ, ಸಾದಾ ವ್ಯಕ್ತಿತ್ವ. ಕೆಳವರ್ಗದ ನೌಕರರನ್ನು ಹಿಡಿದು ಮೇಲಾಧಿಕಾರಿಗಳವರೆಗೆ ಇವರು ಎಲ್ಲರಿಗೂ ಬೇಕಾದವರು. ಇವರದು ಭ್ರಷ್ಟಾಚಾರ ವಿರೋಧಿ ಸ್ವಭಾವ ಎಲ್ಲ ಕೆಲಸ ಕಾರ್ಯಗಳು ಕ್ರಮಬದ್ಧವಾಗಿ, ನಿಯಮಾನುಸಾರವಾಗಿ ನಡೆಯಬೇಕೆಂಬುದು ಇವರ ವಿಚಾರ. ನಿಯಮಗಳನ್ನು ಗಾಳಿಗೆ ತೂರಿ ಯಾವುದೇ ಕೆಲಸ ಕೈಗೊಳ್ಳಲು ಇವರು ಎಂದಿಗೂ ಒಪ್ಪುವವರಲ್ಲ, ಇಂಥ ಕೆಲಸಕ್ಕೆ ಮೇಲಾಧಿಕಾರಿಗಳು ಹೇಳಿದರೂ ಕೇಳುವವರಲ್ಲ. ಅಂಥ ಅಂಜಿಕೆಗೆ ಬೆದರುವವರಲ್ಲ. ''ನ್ಯಾಯನಿಷ್ಠುರಿ ಶರಣ ನಾರಿಗೂ ಅಂಜುವವನಲ್ಲ'' ವೆಂಬ ಶರಣರ ವಚನದಂತೆ ಇವರ ನಡತೆ ಅನೇಕ ಸಲ ಈ ಕಾರಣಕ್ಕಾಗಿಯೇ ಅಧಿಕಾರಿಗಳೊಂದಿಗೆ, ಇತರರೊಂದಿಗೆ, ನಿಷ್ಠುರರಾದದ್ದು ಇದೆ. ಅನ್ಯಾಯ, ಮೋಸದೊಂದಿಗೆ ಎಂದಿಗೂ ಹೊಂದಾಣಿಕೆ ಮಾಡಿಕೊಂಡವರಲ್ಲ. ಬೇಕಾದರೆ ತಮ್ಮನ್ನು ಬೇರೆ ಕಡೆ ವರ್ಗ ಮಾಡಲಿ, ಆದರೆ ತಮ್ಮ ನೀತಿ ನಡವಳಿಕೆಯನ್ನು ಬಿಟ್ಟುಕೊಟ್ಟವರಲ್ಲ, ನಿವೃತ್ತರಾಗುವವರೆಗೂ ಯಾವ ರಾಜಕೀಯ ಪ್ರಭಾವಕ್ಕೆ ಒಳಗಾಗದೆ, ಎಲ್ಲಿ ಹಾಕಿದಲ್ಲಿ ಹೋಗಿ, ಕೆಲಸ ಮಾಡಿದ ಕಾಯಕ ಯೋಗಿ, ಇವರು. ಈ ಕಾಯ್ದೆಬದ್ಧವಾದ ನಡವಳಿಕೆಗಳು ಹಾಗೂ ಹೊಂದಾಣಿಕೆಯಾಗದ ಸ್ವಭಾವವನ್ನು ಕಂಡ ಅನೇಕ ಮೇಲಾಧಿಕಾರಿಗಳು ಇವರ ಹತ್ತಿರ ತಮ್ಮ

ದರಕಾರ, ದರ್ಬಾರ ನಡೆಸುತ್ತಿರಲಿಲ್ಲ. ''ಆತನಿಗೆ ಹೇಳುವುದು ಬೇಡ ಆತ ಯಾರ ಮಾತನ್ನೂ ಕೇಳುವುದಿಲ್ಲ. ರೂಲ್ಸ ಬಿಟ್ಟು ನಡೆಯುವದಿಲ್ಲ. ಆತ ಏನು ಹೇಳುತ್ತಾನೋ ಹಾಗೆ ಕೇಳಿರಿ ಆಬೆಕ್ಷನ್ ಇದ್ದರೆ ಅಟೆಂಡ ಮಾಡಿರಿ'' ಎಂದು ಅಧಿಕಾರಿಗಳು ಹೇಳುತ್ತಿದ್ದರು. ತಿನ್ನದ ಕುಡಿಯದ, ಭ್ರಷ್ಟರಲ್ಲದ ಇಂಥ ಅಪರೂಪದ ವ್ಯಕ್ತಿತ್ವ ಸಿದ್ಧರಾಮರದು. ಹೀಗೆ ತಮ್ಮ ವೃತ್ತಿಯಲ್ಲಿ ಕೂಡ ಇವರು ನಿಷ್ಠೆ, ಪ್ರಾಮಾಣಿಕತೆಗಳನ್ನು ಅಳವಡಿಸಿಕೊಂಡು ನಿರಾತಂಕವಾಗಿ 35 ವರ್ಷಗಳ ಸೇವೆ ಸಲ್ಲಿಸಿ, ಸುರಳಿತವಾಗಿ ನಿವೃತ್ತಿ ಹೊಂದಿ ನಿಶ್ಚಿಂತೆಯಲ್ಲಿರುವರು.

**ಹವ್ಯಾಸಗಳು :**

ಸಿದ್ಧರಾಮರದು ವಿಚಿತ್ರ ವಿಶಿಷ್ಟ, ಅಪರೂಪದ ವ್ಯಕ್ತಿತ್ವ. ಚಿಕ್ಕಂದಿನಿಂದಲೇ ಇವರಿಗೆ ಪಂಚಾಂಗ, ಕುಂಡಲಿ, ಜ್ಯೋತಿಷ್ಯದಲ್ಲಿ ಅಪಾರ ಅನುಭವ. ದಿಗಸಂಗಿಯ ಸುತ್ತ ಮುತ್ತಲಿನ ಹಳ್ಳಿಗಳಲ್ಲಿ ಇವರ ಭವಿಷ್ಯ ಪ್ರಚಾರವಾಗಿತ್ತು. ದನ, ಕರು ಕಳೆದು ಹೋದರೆ, ಏನಾದರೂ ಮನೆಯಲ್ಲಿ ತೊಂದರೆಗಳು ಕಾಣಿಸಿಕೊಂಡರೆ, ಇವರ ಹತ್ತಿರ ಭವಿಷ್ಯ ಕೇಳಲು ಬರುತ್ತಿದ್ದರು. ಮೂಢ ನಂಬಿಕೆಗಳಿಗೆ ಬೆಲೆ ಕೊಡದೆ, ಬಂದವರಿಗೆ ಅನುಕೂಲವಾಗುವ, ಸಮಾಧಾನ ತರುವ, ವಿಚಾರಗಳನ್ನು ಹೇಳಿ ಕಳಿಸುತ್ತಿದ್ದರು. ಜನ್ಮ ಕುಂಡಲಿ ಹಾಕುವುದರಲ್ಲಿ ಎತ್ತಿದ ಕೈ; ಅನೇಕ ಜನರಿಗೆ ಪುಕ್ಕಟೆಯಾಗಿ ಜನ್ಮ ಕುಂಡಲಿ ಹಾಕಿಕೊಟ್ಟಿದ್ದಾರೆ. ತಮ್ಮ ಎಲ್ಲ ಮಕ್ಕಳು, ಅಣ್ಣಂದಿರ ಮಕ್ಕಳ ಜನ್ಮ ಕುಂಡಲಿಯನ್ನು ಹಾಕಿದ್ದಾರೆ.

ಇವರ ಇನ್ನೊಂದು ಹವ್ಯಾಸ ವೆಂದರೆ ಜನಪದ ವೈದ್ಯ. ಗಿಡ ಗಂಟೆ, ಬೇರು ಬಡ್ಡಿಗಳಿಂದ ಅನೇಕ ರೋಗಗಳನ್ನು ಸುಲಭವಾಗಿ ಗುಣಪಡಿಸಬಹುದೆಂಬುದು ಇವರ ನಿಲುವು. ಅನೇಕ ಸಣ್ಣ ಪುಟ್ಟ ರೋಗಗಳಿಗೆ ಇವರಿಗೆ ಆಯುರ್ವೇದವನ್ನೇ ಬಳಸುವ ರೂಢಿ. ಇಂಗ್ಲೀಷ ಔಷಧ, ಹೋಮಿಯೋಪಥಿ ಹಾಗೂ ಆಯುರ್ವೇದಗಳ ಸಾರವನ್ನು ಚೆನ್ನಾಗಿ ಬಲ್ಲವರು. ಬಡವರಿಗೆ ಸುಲಭವಾದ ಔಷಧೋಪಚಾರವನ್ನು ಪುಕ್ಕಟೆಯಾಗಿ ಹಂಚುವರು. ಹಳದಿ ಕಾಮಾಲೆಗೆ ಇವರು ಕೊಡುವ ದೇಶೀ ಔಷಧ ಬಹಳ ಪ್ರಸಿದ್ಧವಾಗಿದೆ. ಗುಲಬರ್ಗಾದ ಬಹಳಷ್ಟು ಪರಿಚಿತ ಕುಟುಂಬದವರು ತಮ್ಮಲ್ಲಿ ಯಾರಿಗಾದರೂ ಕಾಮಣಿಯಾದರೆ ಸೀದಾ ಇವರ ಮನೆಗೆ ಕರೆದುಕೊಂಡು ಬಂದು ಔಷಧ,

ತೆಗೆದುಕೊಳ್ಳುವರು. ಆದರೆ ಯಾರಿಂದಲೂ ಒಂದು ಪೈಸೆಯನ್ನು ಸಹ ಅಪೇಕ್ಷಿಸದೇ ಸೇವಾಭರಿತ ಉಪಚಾರ ಇವರದು. ಯಾವ ರೋಗಕ್ಕೆ ಯಾವ ಮದ್ದು ಎಂಬುದನ್ನು ಇವರು ಕರಾರುವಾಕ್ಕಾಗಿ ಹೇಳುವರು. ಈ ನಿಟ್ಟಿನಲ್ಲಿ ಇವರ ಸಲಹೆ ಅಮೂಲ್ಯವಾದುದು. ಅನೇಕ ಸಲ ಇವರ ಮಿತ್ರರು ಇವರಿಂದ ಸೂಕ್ತ ಸಲಹೆ ಸೂಚನೆಗಳನ್ನು ಪಡೆದುಕೊಂಡು ಗುಣಮುಖರಾಗಿರುವರು.

**ಕೌಟುಂಬಿಕ ಜೀವನ :**

ಶ್ರೀ ಶರಣಪ್ಪ ಗೌಡ ಮತ್ತು ತಾರಾಬಾಯಿ ದಂಪತಿಗಳಿಗೆ ಒಟ್ಟು ಐವರು ಮಕ್ಕಳು, ನಾಲ್ಕು ಗಂಡು, ಒಂದು ಹೆಣ್ಣು. ಮೊದಲನೆಯವನಾದ ಗುರುಲಿಂಗಪ್ಪನವರು ಊರಲ್ಲಿಯೇ ಇದ್ದು, ಒಕ್ಕಲುತನ ಮಾಡುವುದಲ್ಲದೆ, ಊರ ಪೋಲೀಸ ಗೌಡಕಿ ಸಹ ಮಾಡುತ್ತಿದ್ದರು. ಆದರೆ ಆ ಹುದ್ದೆಯೇ ಈಗ ದಳಪತಿ ಎಂದಾಗಿದ್ದು, ಇವರೇ ಕಾರ್ಯ ನಿರ್ವಹಿಸುತ್ತಾ ದಿಗಸಂಗಿಯಲ್ಲಿಯೇ ವಾಸ ಮಾಡುತ್ತಿರುವರು.

ಎರಡನೆಯರಾದ ಶಾಮರಾವ ಇವರು ಕೂಡ ಊರಲ್ಲಿಯೇ ನೆಲೆಸಿದ್ದು, ಒಕ್ಕಲುತನದ ಜೊತೆಗೆ ಆರ್. ಎಂ.ಪಿ. ವೈದ್ಯರಾಗಿ ಸುತ್ತ ಮುತ್ತಲಿನ ಹಳ್ಳಿಯ ಜನರಿಗೆ ಔಷಧೋಪಚಾರ ಮಾಡುತ್ತಿರುವರು.

ಮೂರನೇಯವರು, ಅವರ ಸಹೋದರಿ ಭಾಗ್ಯವಂತಿ. ಇವರನ್ನು ಗುಲಬರ್ಗಾದ ಹೆಸರಾಂತ ಮನೆತನವಾದ ಶಹಾಬಜಾರಿನ ಬಂಡಕ ಮನೆತನಕ್ಕೆ ಕೊಡಲಾಗಿತ್ತು. ಆದರೆ ದುರ್ದೈವಶಾತ್ ಭಾಗ್ಯವಂತಿ ನಡುವಯಸ್ಸಿನಲ್ಲಿಯೇ ತೀರಿಕೊಂಡರು.

ನಾಲ್ಕನೇಯವರಾದ ಶಂಕರರಾವ ಇವರು ಡಿಪ್ಲೋಮಾ ಎಲೆಕ್ಟ್ರಿಕಲ್ ಪಾಸಾಗಿ, ತಲಾಟಿಯಾಗಿ ಸೇವೆ ಸಲ್ಲಿಸಿ, ನಿವೃತ್ತಿ ಹೊಂದಿ, ಗುಲಬರ್ಗಾದಲ್ಲಿ ವಾಸಿಸುತ್ತಿರುವರು.

ಐದನೇ ಹಾಗೂ ಕೊನೆಯವರೇ ಶ್ರೀ ಸಿದ್ಧರಾಮರು. ಇವರು ಬಿ. ಇ. (ಮೆಕ್ಯಾನಿಕಲ್) ಪಾಸಾಗಿ, 35 ವರ್ಷಗಳ ಸರಕಾರಿ ಸೇವೆ ಸಲ್ಲಿಸಿ, ಜೂನ್ 2004 ನಲ್ಲಿ ನಿವೃತ್ತಿ ಹೊಂದಿ, ಗುಲಬರ್ಗಾ ದಲ್ಲಿ ವಾಸಿಸುತ್ತಿರುವರು.

'ಮನೆಗೆದ್ದು ಮಾರುಗೆದೆ' ಎಂಬ ಜಾನಪದ ಅನುಭವ ಉಕ್ತಿಯಂತೆ, ಮನೆಯೇ ಇವರಿಗೆ ತೃಪ್ತಿಯ ತಾಣವಾಗಿದೆ. ಯಜಮಾನಿಕೆಯ ಸಾರಥ್ಯ ವಹಿಸಿಕೊಂಡವನು ತನ್ನಂತೆ ಎಲ್ಲರನ್ನು ಕಂಡಾಗ

ಕೌಟುಂಬಿಕ ಜೀವನದಲ್ಲಿ ಗೌರವ ಮತ್ತು ನೆಮ್ಮದಿಯನ್ನು ಕಾಣಲು ಸಾಧ್ಯವಾಗುತ್ತದೆ. ಶ್ರೀ ಸಿದ್ದರಾಮ ಪೋಲೀಸ ಪಾಟೀಲ ಅವರದು ಸಂತೃಪ್ತಿ ಜೀವನವಾಗಿದೆ. ಶ್ರೀ ಸಿದ್ಧರಾಮ ಪೋಲೀಸ ಪಾಟೀಲರಿಗೆ ಒಬ್ಬಳೇ ಅಕ್ಕಳಾದ ಭಾಗ್ಯವಂತಿಯ ಹಿರಿಯ ಮಗಳಾದ ಜಗದೇವಿಯೊಂದಿಗೆ 1967 ರಲ್ಲಿ ವಿವಾಹವಾವಾಯಿತು. ಆಗ ಪಾಟೀಲರು ಇನ್ನೂ ಇಂಜೀನಿಯರಿಂಗ್ ಮೂರನೇ ವರ್ಷದಲ್ಲಿ ಓದುತ್ತಿದ್ದರು. 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎನ್ನುವಂತೆ ಪರಸ್ಪರ ಹೊಂದಾಣಿಕೆಯಿಂದ ಜೀವನ ಸಾಗಿಸಿದರು. ಸಮರಸದ ಬದುಕು ಸ್ವರ್ಗದೌತಣಕ್ಕಿಂತಲೂ ಮಿಗಿಲಾದ್ದೆಂಬುದನ್ನು ಅರಿತು ನಡೆದರು. ದಾಂಪತ್ಯದ ಬಾಳಿನಲ್ಲಿ ಎರಡು ಬೇಕು ಮೂರು ಸಾಕು ಎನ್ನುವ ಉಕ್ತಿಯಂತೆ ಎರಡು ಹೆಣ್ಣು, ಒಂದು ಗಂಡು ಸಂತಾನ. ಎಲ್ಲರೂ ವಿದ್ಯಾವಂತರು ಹಿರಿಯ ಮಗಳು ಡಾ. ಸುವರ್ಣ.. ಬಸೆಟ್ಟಿ ಎಂ. ಎ. ಪಿ.ಹೆಚ್.ಡಿ. ಅಳಿಯ ಅಶೋಕ. ಬಿ. ಬಸೆಟ್ಟಿ ಇಂಜೀನಿಯರ ( ಕಲ್ಯಾಣಿ, ಸ್ಟೀಲ ಇಂಡಸ್ಟ್ರೀಸ ಹೊಸಪೇಟ ), ಎರಡನೇ ಮಗಳು ಸುನಿತಾ ಬಿ. ಎ., ಬಿ. ಎಡ್. ಹಾಗೂ ಮಗನಾದ ಸುರೇಂದ್ರ ಬಿ. ಎಸ್.ಸಿ. ಎಂ.ಬಿ. ಎ. (ಮಾರ್ಕೆಟಿಂಗ್) ಗುಲಬರ್ಗಾ. ಮೊಮ್ಮಕ್ಕಳು ಸಮೀಕ್ಷಾ ಹಾಗೂ ಪ್ರತೀಕ್ಷಾ. ಎಲ್ಲರೂ ತಂದೆಯಂತೆ ಉತ್ತಮ ಸಂಸ್ಕಾರ ಹೊಂದಿದವರು. ತಾಯಿ ತಂದೆಗಳ ಪ್ರೀತಿ ವಾತ್ಸಲ್ಯ ಪಡೆದು ತಮ್ಮ ತಮ್ಮ ಕಾಯಕದಲ್ಲಿ ನಿರತರಾಗಿರುವರು.

**ಪ್ರಶಸ್ತಿ ಮತ್ತು ಗೌರವ :**

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಎಂದಿಗೂ ಪ್ರಶಸ್ತಿಗಳ ಹಿಂದೆ ಬಿದ್ದವರಲ್ಲ ಅವರು ಬರೆಯುವುದು ಕೂಡಾ ಯಾವುದೇ ಪ್ರಶಸ್ತಿಗಾಗಿ ಅಲ್ಲ. ತಮ್ಮ ಮನಸ್ಸಿನ ಸಂತೋಷಕ್ಕಾಗಿಯೇ ಇವರ ಸಾಹಿತ್ಯ ಸೃಷ್ಟಿ. ಯಾವುದೇ ಪತ್ರಿಕೆಗೆ ಸಹ ಲೇಖನ, ಕವನ ಕಳಿಸಿದವರಲ್ಲ. ಅವರಾಗಿ ಇವರನ್ನು ಕೇಳಿದರೆ ಮಾತ್ರ ಕಳಿಸುವರು. ಆಕಾಶವಾಣಿ, ದೂರದರ್ಶನಗಳಲ್ಲಿ ಇವರಾಗಿಯೇ ಹೋಗಿ ಕಾರ್ಯಕ್ರಮ ಕೊಡಿರೆಂದು ಕೇಳಿದವರಲ್ಲ. ಯಾರೇ ಆಗಲಿ ಇವರಿಗೆ ಎಂಥದೇ ವಿಷಯ ಕೊಟ್ಟು ಬರೆಯಲು ಕೇಳಿಕೊಂಡರೆ, ಇಲ್ಲವೆನ್ನದೇ, ಕಷ್ಟಪಟ್ಟು ನಿಗದಿತ ಸಮಯಕ್ಕೆ ಕೊಡುವ ನಿಷ್ಠಾವಂತರು. ತಾವಾಗಿ ಮುಂದೆ ಬಂದು ತನಗೆ ಇದನ್ನು ಕೊಡಿರಿ ಎಂದು ಕೇಳುವ ಸ್ವಭಾವ ಹುಟ್ಟಿನಿಂದಲೇ ಇವರಿಗಿಲ್ಲ.

ಆದರೆ ಇವರು ಬೇಡಲಿ, ಬಿಡಲಿ ಬರುವ ಕಾಲಕ್ಕೆ ಏನು ಬರುವವೋ ಅವು ಬಂದೇ ಬರುವವು. ''ಹರನಿವ ಕಾಲಕ್ಕೆ ಸಿರಿಯು ಬೆನ್ನಲಿ ಬಕ್ಕು'' ಎಂಬ ತತ್ವದವರು. ರಾಷ್ಟ್ರಕವಿ ಕುವೆಂಪು ರವರ ಅಭಿಮಾನಿಗಳಾದ, ಇವರು ಅವರಂತೆಯೇ ಪ್ರಚಾರ ಪ್ರಿಯತೆಗೆ ಮಾರು ಹೋದವರಲ್ಲ. 'ಕೀರ್ತಿ ಶನಿ ತೊಲಗಾಚೆ' ಎನ್ನುವ ಸ್ವಭಾವದವರು. 'ಹರನೀವ ಕಾಲಕ್ಕೆ ಕೊರಡು ಕೊನರುವುದು, ಬರಡು ಹಯನವಹುದು, ಸಕಲ ಪಡಿಪದ್ಯಾರ್ಥಗಳು ಇದಿರಲ್ಲಿಪ್ಪವು'. ಎಂಬ ಶರಣರ ಮಾತಿನಂತೆ ನಡೆದುಕೊಂಡವರು.

1. ಇವರು ಬಯಸದಿದ್ದರೂ ಇವರ ಹಳ್ಳಿಯ ಹವಳಗಳು ಪುಸ್ತಕಕ್ಕೆ 1984 ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದ ರಾಜ್ಯೋತ್ಸವ ಬಹುಮಾನ ದೊರಕಿದೆ.
2. 'ಸಾಹಿತಿಗಳ ಸಹವಾಸದಲ್ಲಿ ' ಎಂಬ ಪ್ರಬಂಧ ಸಂಕಲನವು ಗು.ವಿ.ಗು. ದ ಬಿ.ಕಾಂ. ಭಾಗ-1 ರ ತರಗತಿಗಾಗಿ 1997-98 ರಿಂದ ಪಠ್ಯ ಪುಸ್ತಕವಾಗಿತ್ತು.
3. ಮುಂಬಯಿಯ ಬಲ್ಲವರ ಸಂಘದಿಂದ ನಡೆಸುವ 'ಅಕ್ಷಯ' ಮಾಸ ಪತ್ರಿಕೆಯ ರಾಜ್ಯ ಮಟ್ಟದ ಹಾಸ್ಯ ಲೇಖನ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ 2002 ರಲ್ಲಿ.
4. ''ನಗೆ-ಮುಗಳು'' ಹಾಸ್ಯ ಮಾಸ ಪತ್ರಿಕೆಯ ತುಮಕೂರು 2003 ರಲ್ಲಿ ಆಯೋಜಿಸಿದ್ದ ರಾಜ್ಯ ಮಟ್ಟದ ಹಾಸ್ಯ ಲೇಖನ ಸ್ಪರ್ಧೆಯಲ್ಲಿ ಮೆಚ್ಚುಗೆ ಬಹುಮಾನ.
5. ಗೌರವ ಪ್ರಶಸ್ತಿ -1981 ರಲ್ಲಿ ಗುಲಬರ್ಗಾ ತಾಲೂಕಿನ ಕನ್ನಡ ಸಾಹಿತ್ಯ ಪರಿಷತ್ತು. ಅಧ್ಯಕ್ಷ.
6. 1989 ರಿಂದ ಮೂರು ವರ್ಷ ಗುಲಬರ್ಗಾ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಗೌರವ ಕಾರ್ಯದರ್ಶಿ.
7. ಗುಲಬರ್ಗಾದಲ್ಲಿ ನಡೆದ ಅಖಿಲ ಭಾರತ 58 ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಂಟಪ ನಿರ್ಮಾಣ ಕಾರ್ಯದ ಸಂಚಾಲಕ.
8. ಕಲಬುರ್ಗಿ ಜಿಲ್ಲಾ 2ನೇ ಹಾಗೂ 3ನೇ ಕನ್ನಡ ಸಾಸಹಿತ್ಯ ಸಮ್ಮೇಳನದಲ್ಲಿ ಸಕ್ರಿಯವಾಗಿ ಭಾಗಿ.
9. 1999 ರಲ್ಲಿ ನಡೆದ ಕಲಬುರ್ಗಿ ಜಿಲ್ಲಾ 5ನೇ ಕನ್ನಡ ಸಾಹಿತ್ಯ ಸಮ್ಮೇಳನ ಮತ್ತು ಜೇವರ್ಗಿಯಲ್ಲಿ ನಡೆದ 8 ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕವಿಗೋಷ್ಠಿಯ ಅಧ್ಯಕ್ಷ ಸ್ಥಾನ.

10. 2006 ರಲ್ಲಿ ಜರುಗಿದ ಅಫಜಲಪೂರ ತಾಲೂಕ 2ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನ.

ಇಂಜೀನಿಯರರಾದರೂ ಸಾಹಿತ್ಯ ಕಾರ್ಯಕ್ರಮದಲ್ಲಿ ತೊಡಗಿಸಿಕೊಂಡು ಸುಮಾರು ಇಪ್ಪತ್ತಾರರಷ್ಟು ಕೃತಿಗಳನ್ನು ರಚಿಸಿ, ಇಷ್ಟೆಲ್ಲಾ ಹೆಸರು ಮಾಡಿದ್ದು, ಇವರ ವಿಶೇಷತೆಯೆಂದೇ ಹೇಳಬೇಕು. ಶಿಕ್ಷಣಕ್ಷೇತ್ರದಲ್ಲಿದ್ದವರು ಸಾಧನೆ ಮಾಡುವುದು ದೊಡ್ಡ ವಿಷಯವಲ್ಲ. ಆದರೆ ಬೇರೆ ಕ್ಷೇತ್ರದಲ್ಲಿದ್ದು ಸಾಹಿತ್ಯ ಸೇವೆ ಮಾಡುವುದು ವಿಶಿಷ್ಟವಾದುದು ಮತ್ತು ಅಪರೂಪವಾದುದು. ರಾಜ್ಯ ಸಾಹಿತ್ಯ ಅಕಾಡೆಮಿ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಇವರ ಹೆಸರನ್ನು ಗುರುತಿಸಿಕೊಂಡಿದೆ. ಗುಲಬರ್ಗಾದಲ್ಲಿ ಪ್ರಥಮವಾಗಿ ಜರುಗಿದ ಕೇಂದ್ರ ಸಾಹಿತ್ಯ ಅಕಾಡೆಮಿಯ ಕವಿಗೋಷ್ಠಿಯಲ್ಲಿ ಇವರ ಹೆಸರು ಪ್ರಮುಖವಾಗಿದೆ. ರಾಜ್ಯ ಸಾಹಿತ್ಯ ಅಕಾಡೆಮಿಯು ಇವರಿಂದ 1994 ಲ್ಲಿ ಹಾಸ್ಯ ಸಾಹಿತ್ಯ ಸಂಪಾದನೆ ಕೆಲಸ ವಹಿಸಿತ್ತು. 2004 ರಲ್ಲಿ ಕವಿತಾ ಸಂಪಾದನೆ ಮಾಡಲು ತಿಳಿಸಿತು. ತಮಗೆ ವಹಿಸಿದ ಕಾರ್ಯವನ್ನು ಶ್ರೀ ಸಿದ್ಧರಾಮರು ಅತ್ಯಂತ ದಕ್ಷತೆಯಿಂದ ಶಿಸ್ತು ಬದ್ಧವಾಗಿ, ವೇಳೆಗೆ ಸರಿಯಾಗಿ ಮಾಡಿಕೊಟ್ಟು ಅಕಾಡೆಮಿಯ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ಹೀಗೆ ಇವರ ಕೀರ್ತಿ ರಾಜ್ಯ ಮಟ್ಟದ ವರೆಗೆಹಬ್ಬಿದರೂ, ಎಳ್ಳಷ್ಟೂ ಅಹಂ ಇಲ್ಲದೆ, ಉದಯೋನ್ಮುಖರಿಗೆ ಮಾರ್ಗದರ್ಶನ ಮಾಡುತ್ತಾ, ಕೇಳಿದವರಿಗೆಲ್ಲ ಮುನ್ನುಡಿ ಬರೆದು ಕೊಡುತ್ತಾ, ಲೇಖನಕಾವ್ಯಗಳನ್ನು ತಿದ್ದಿ ಕೊಡುತ್ತಾ, ತಮ್ಮ ವಿನಯ ಶೀಲತೆಯಿಂದ ಮೆರೆಯುತ್ತಿದ್ದಾರೆ. 'ಎನಗಿಂತ ಕಿರಿಯರಿಲ್ಲ, ಶಿವಶರಣರಿಗಿಂತ ಹಿರಿಯರಿಲ್ಲ' ಎಂಬ ಶರಣರ ನುಡಿಯೇ ಇವರ ಧ್ಯೇಯವಾಗಿದೆ.

## ವ್ಯಕ್ತಿತ್ವ :

ಶ್ರೀ ಸಿದ್ಧರಾಮರ ವ್ಯಕ್ತಿತ್ವ, 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು' ಎನ್ನುವಂತಹದ್ದು ನೋಡಲು ಅತ್ಯಂತ ಸೀದಾ ಸಾದಾ ವ್ಯಕ್ತಿತ್ವ. ಅವರ ಉಡುಗೆ ತೊಡುಗೆಗಳಂತೂ ಬಹಳ ಸರಳ, ಆಡಂಬರವಿಲ್ಲದ ಅದೇ ಸಾದಾ ಪ್ಯಾಂಟು, ಬುಶ್ಶರ್ಟು ಇವರ ಉಡುಗೆ. ಎಂದಿಗೂ ಶೋಕಿ ಜೀವನ ನಡೆಸಿದವರಲ್ಲ. ಇವರನ್ನು ನೋಡಿದರೆ ಇಂಜೀನಿಯರರೆಂದು ಅನ್ನಿಸುವದೇ ಇಲ್ಲ. ಅನೇಕರು ಇವರನ್ನು ನೀವು ಯಾವ ಶಾಲೆಯಲ್ಲಿ ಮಾಸ್ತರರಾಗಿರುವಿರಿ? ಎಂದು ಕೇಳಿದ್ದುಂಟು ಯಾರೇ ಸಿಕ್ಕರೂ

ತಾವಾಗಿಯೇ ಮಾತಾಡಿಸುವ, ಒಳ್ಳೇಗುಣ. ಅಧಿಕಾರ ವಿದ್ದಾಗಲೂ ಎಂದಿಗೂ ಅಧಿಕಾರದ ದರ್ಪ ತೋರಿಸಿದವರಲ್ಲ. ಪೋಲೀಸ ಗೌಡರ ಮನೆತನದವರಾಗಿದ್ದೂ ಕೂಡ, ಎಂದಿಗೂ ಗರ್ವ, ಧಿಮಾಕು ಮಾಡಿದವರಲ್ಲ. ಬಿಚ್ಚು ಮನಸ್ಸಿನ ಸರಳ ಸ್ವಭಾವ. ಇದ್ದದನ್ನು ಇದ್ದಂತೆ ಹೇಳುವ ಗಟ್ಟಿತನ. ಸುಳ್ಳಾಡುವರನ್ನು ಕಂಡರೆ ಇವರಿಗೆ ಆಗದು. ಏನಿದ್ದರೂ ಸತ್ಯವನ್ನೇ ಹೇಳಬೇಕು ಎಂಬ ದೃಢ ನಿಲುವು. ಅದಕ್ಕಾಗಿಯೇ ಏನೋ ಇವರು ತಮ್ಮ ಸಾಹಿತ್ಯ ರೂಪದ ತ್ರಿಪದಿಗೆ 'ಸತ್ಯಜ್ಞ' ಎಂಬ ಅಂಕಿತವನ್ನು ಇಟ್ಟಿದ್ದಾರೆ. ಮಿತ್ರರೊಂದಿಗೆ ಸದಾ ಹಾಸ್ಯ ಭರಿತವಾದ ಮಾತು, ಹೆಚ್ಚಿನ ಆಸೆ ಪಡದೇ ಇದ್ದುದರಲ್ಲಿಯೇ ಸಂತೃಪ್ತಿಗೊಳ್ಳುವ ಗುಣ.

ಇವರ ಸಾಹಿತ್ಯ ಸೇವೆ ವಿಶಿಷ್ಟವಾದುದು. ಛಂದೋಬದ್ಧ, ಪ್ರಾಸಬದ್ಧ, ತ್ರಿಪದಿಗಳನ್ನು (ಸತ್ಯಜ್ಞನ ವಚನಗಳು) ಹಲವಾರು ಕೆಲಸಗಳ ಮಧ್ಯೆಯೂ ಬಿಡುವು ಮಾಡಿಕೊಂಡು ಬರೆಯುತ್ತಾ ಸುಮಾರು 6,700 ವಚನಗಳನ್ನು ಬರೆದಿದ್ದಾರೆ. ಹಾಸ್ಯ ಸಾಹಿತ್ಯ ಇವರ ಅಚ್ಚುಮೆಚ್ಚಿನ ಸಾಹಿತ್ಯ. ಅನೇಕ ಪತ್ರಿಕೆಗಳಿಗೆ, ಆಕಾಶವಾಣಿಗೆ ಹಾಸ್ಯ ಲೇಖನಗಳನ್ನು ಬರೆದಿದ್ದಾರೆ. ಇವರ ಹಾಸ್ಯ ಕವನಗಳಂತೂ ಕೇಳುಗರನ್ನು ನಕ್ಕು ನಗಿಸುವರಂತೆ ಮಾಡುವವು. ವ್ಯಕ್ತಿ ಪರಿಚಯ ಹಾಗೂ ಜೀವನ ಚರಿತ್ರೆಯನ್ನು ಬರೆಯುವುದರಲ್ಲಿ ಪಳಗಿದ ಕೈ. ಅನೇಕ ಹಿರಿಯ ಸಾಹಿತಿಗಳು ಇವರ ಕವನ, ಲೇಖನಗಳನ್ನು ಮೆಚ್ಚಿ ಪತ್ರ ಬರೆದಿದ್ದಾರೆ. ಸಂಪಾದನೆಗಿಂತ ಸೃಜನಾತ್ಮಕ ಸಾಹಿತ್ಯದತ್ತ ಇವರ ಒಲುವು ಜಾಸ್ತಿ. ಭಜನೆ ಹಾಡು, ಗೀಗಿ ಹಾಡುಗಳೆಂದರೆ ಇವರಿಗೆ ಬಹಳ ಇಷ್ಟ. ಹೀಗಾಗಿ ತಾವೇ ಅನೇಕ ಭಜನೆ ಹಾಡು, ಗೀಗೀ ಹಾಡು, ತತ್ವಪದಗಳನ್ನು ಬರೆದಿದ್ದಾರೆ. ಇವರದು ಸದಾ ಓದುವ, ಬರೆಯುವ ಗೀಳು ಸ್ವಲ್ಪ ಸಮಯ ಸಿಕ್ಕಿದರೂ ಆ ಸಮಯವನ್ನು ಓದುವುದರಲ್ಲಿ, ಇಲ್ಲವೇ ಬರೆಯುವುದರಲ್ಲಿ ಕಳೆಯುವರು. ಉಳಿದ ಯಾವುದೇ ಚಟಗಳಿಲ್ಲದ ಆಧ್ಯಾತ್ಮಿಕ ಜೀವನ. ಮನೆಯಲ್ಲಿ ಹೆಂಡತಿ ಮಕ್ಕಳೊಂಗೆ ಅತ್ಯಂತ ಪ್ರೀತಿಯ ಅಕ್ಕರೆಯ ಬಾಳು.

ಕನ್ನಡವೆಂದರೆ ಪಂಚಪ್ರಾಣ. ಹೈಸ್ಕೂಲು ಶಿಕ್ಷಣವನ್ನು ಕನ್ನಡ ಮಾಧ್ಯಮದಲ್ಲಿಯೇ ಕಲಿತದ್ದು. ಅಲ್ಲದೆ ತಮ್ಮ ಎಲ್ಲ ಮಕ್ಕಳನ್ನು ಕೂಡ ಕನ್ನಡ ಮಾದ್ಯಮದಲ್ಲಿಯೇ ಓದಿಸಿರುವರು. ಒಬ್ಬ ಪ್ರಥಮ ದರ್ಜೆ ಅಧಿಕಾರಿಯಾಗಿದ್ದರೂ ಸಹಿತ ಮಕ್ಕಳನ್ನು ಕಾನ್ವೆಂಟ ಶಾಲೆಗೆ ಹಾಕದೆ, ಕನ್ನಡದ ಅಭಿಮಾನವನ್ನು ಮೆರೆದಿದ್ದಾರೆ. ಅಲ್ಲದೆ ಒಬ್ಬ ಮಗಳನ್ನು ಕನ್ನಡ ಜಾನಪದ ಎಂ.ಎ. ಓದಿಸಿದ್ದಲ್ಲದೆ,

ಗೀ ಗೀ ಹಾಡುಗಳ ಬಗ್ಗೆ ಪಿಎಚ್.ಡಿ. ಮಾಡಿಸಿದ್ದಾರೆ. ತಾವು ಕೆಲಸ ಮಾಡುತ್ತಿದ್ದ ಕಛೇರಿಯಲ್ಲಿ ಎಲ್ಲ ವ್ಯವಹಾರವನ್ನು ಕನ್ನಡಲ್ಲಿಯೇ ಮಾಡಿಸಿದ ದಿಟ್ಟ ಅಧಿಕಾರಿ. ಕೈಕೆಳಗಿನವರಿಗೆ ಕನ್ನಡ ಬಾರದಿದ್ದರೆ ತಾವೇ ಸ್ವತಃ ಬರೆಯುವುದು ಇವರ ಕೆಲಸವಾಗಿತ್ತು. ಸುಮಾರು ಮೂರು ದಶಕಗಳಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರಾಗಿದ್ದಾರೆ. ಸಾವಿರಾರು ಕನ್ನಡ ಪುಸ್ತಕಗಳ ಸಂಗ್ರಹ ಇವರಲ್ಲಿದೆ. ಒಬ್ಬ ಕನ್ನಡ ಪ್ರಾಧ್ಯಾಪಕರಲ್ಲಿರಬೇಕಾದ ಅನೇಕ ಗ್ರಂಥಗಳು ಇರವಲ್ಲಿವೆ. ಅನೇಕ ಸಲ ಇವರ ಮಿತ್ರರಾದವರು, '' ನೀವು ನಿಜವಾಗಿಯೂ ಒಬ್ಬ ಕನ್ನಡ ಲೆಕ್ಚರರ ಆಗಬೇಕಾಗಿತ್ತು. ತಪ್ಪಿ ಇಂಜೀನಿಯರ್ ಆಗಿದ್ದೀರಿ. ಇದರಿಂದ ಕನ್ನಡಕ್ಕೆ ದೊಡ್ಡ ಹಾನಿಯಾಗಿದೆ'' ಎಂದು ಹೇಳಿದ್ದುಂಟು.

ಒಟ್ಟಿನಲ್ಲಿ ಶ್ರೀ ಸಿದ್ಧರಾಮರದು ಮೃದು, ಸರಳ ಹೃದಯ, ಸ್ನೇಹಮಯ ಸ್ವಭಾವ ಕಲಬುರ್ಗಿಯಲ್ಲಿ ಹೆಸರಾಂತ ಕವಿಯೆಂದು ಕರೆಯಿಸಿಕೊಂಡಿರುವರು.

## ಅಧ್ಯಾಯ- ಮೂರು

# ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಸಮಗ್ರ ಸಾಹಿತ್ಯ ವಿವೇಚನೆ

1. ಕವನ ಸಂಕಲನಗಳು
   - ★ ನಾನೂ ನಮ್ಮಪ್ಪನ್ಹಾಂಗ
   - ★ ನೀನೊಮ್ಮೆ ಸತ್ತು ನೋಡು
   - ★ ಮತ್ತೇಕೆ ಮೂಕವೇದನೆ.
2. ಸಂಪಾದನ ಸಾಹಿತ್ಯ
   - ★ ಬೆಣ್ಣೆತೊರೆ
   - ★ ಶಬ್ದ ಸೋಪಾನ
   - ★ ವಿನೋದ ಸಾಹಿತ್ಯ- 1995.
   - ★ ಕವಿತಾ ಸಂಕಲನ – 2004.
3. ಪ್ರಬಂಧ ಸಂಕಲನಗಳು
   - ★ ಹಳ್ಳಿಯ ಹವಳಗಳು.
   - ★ ಸಾಹಿತಿಗಳ ಸಹವಾಸದಲ್ಲಿ ( ನಾ ಮಾಡ್ಕೊಂಡ ಹಜಾಮತಿ)
4. ತತ್ವಪದ ಸಾಹಿತ್ಯ
   - ★ ಬುಡಮೇಲಾದ ಗಿಡ
5. ಚುಟುಕು ಸಾಹಿತ್ಯ
   - ★ ಕವಣೆಗಲ್ಲು

6. ಜೀವನ ಚರಿತ್ರೆಗಳು :

- ★ ನಿರಂಜನ ಜಂಗಮ ಅಲ್ಲಮ ಪ್ರಭು
- ★ ಹಾವಿನ ಹಾಳ ಕಲ್ಲಯ್ಯ
- ★ ಶ್ರೀ ಕಾಡಸಿದ್ಧೇಶ್ವರರು.
- ★ ಪ್ರೊ. ಪ್ರಭುಲಿಂಗಯ್ಯ ಮಲ್ಲಾಪುರ.

7. ಆಧುನಿಕ ವಚನಗಳು :

- ★ ಸತ್ಯಜ್ಞನ ವಚನಗಳು ಭಾಗ- 1.
- ★ ಸತ್ಯಜ್ಞನ ವಚನಗಳು ಭಾಗ-2.
- ★ ಘತ್ಯಜ್ಞನ ವಚನಗಳು ಭಾಗ-3.

8. ಇತರೆ ಸಾಹಿತ್ಯ :

- ★ ಭೂಗರ್ಭ ಜಲ.
- ★ ಹಾಸ್ಯ ಸಾಹಿತ್ಯ.
- ★ ಅಭಿನಂದನ ಲೇಖನಗಳು.

# ಅಧ್ಯಾಯ-3

## ಸಿದ್ಧರಾಮ ಪೋಲೀಸ ಪಾಟೀಲರ ಸಮಗ್ರ ಸಾಹಿತ್ಯ ವಿವೇಚನೆ

### 1. ಕವನ ಸಂಕಲನಗಳು :

'ಕವ್ಯ' ಅಂದರೆ ವರ್ಣಿಸು, ಮನದಲ್ಲಿ ಮೂಡಿಬಂದ ಭಾವನೆಗಳನ್ನು ಸುಂದರವಾದ ಶಬ್ದಗಳಲ್ಲಿ ವರ್ಣಿಸುವ, ರಚಿಸುವ, ಕರ್ಮ ಕೌಶಲ್ಯವೇ ಕಾವ್ಯವಾಗಿದೆ. ಇದರ ರಚನಕಾರನೇ ಕವಿ. ಕವಿಯ ಭಾವನೆಗಳು ವಾಸ್ತವಿಕ ಜಗತ್ತಿನ ಸತ್ಯ ಸಂಗತಿಗಳಾಗಿರಬಹುದು. ಇಲ್ಲವೇ ಕಾಲ್ಪನಿಕವಾಗಿರಬಹುದು. ಈ ಕಾವ್ಯದ ಮುಖ್ಯ ಗುರಿ. ಸೌಂದರ್ಯದ ಅನ್ವೇಷಣೆಯಾಗಿದೆ.

ಶ್ರೀ ಸಾಮಾನ್ಯನ ಕನಸು, ಹಂಬಲ, ನಿರಾಸೆ, ಪ್ರೇಮ, ಸ್ನೇಹ ದ್ವೇಷ , ಬೆರಗು-ಬೇಸರ ಇವು ಎಲ್ಲ ಕಾವ್ಯದ ವಸ್ತುಗಳಾಗಿವೆ. ಕಾವ್ಯದಲ್ಲಿ ಈ ಎಲ್ಲಾ ವಿಷಯ ವಸ್ತು ಬಂದಿರುವುದನ್ನು ಇಂಗ್ಲೀಷ ಸಾಹಿತ್ಯದಲ್ಲಿ ಕಾಣುತ್ತೇವೆ. ಆದ್ದರಿಂದ ನವೋದಯ ಪೂರ್ವದ ಕವಿಗಳೂ, ನವೋದಯದ ಕವಿಗಳಿಗೂ ಭಾವಗೀತೆಗೆ ಸಹಜವಾಗಿ ಒಲಿದರು.

ತಾವು ಯಾವ ಒಂದು ಮಾರ್ಗಕ್ಕೆ ಸೇರಿದವರು ಎನ್ನಿಸಿಕೊಳ್ಳದೆ, ತಮ್ಮ ಅನುಭವಕ್ಕೆ ಕವನ ರೂಪ ಕೊಡುವ ಕಾರ್ಯವನ್ನು ಅನೇಕರು ನಡೆಸಿಕೊಂಡು ಹೋಗುತ್ತಿದ್ದಾರೆ. ಅಂಥವರಲ್ಲಿ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಒಬ್ಬರು. ಈಚೆಗೆ ಬರೆಯುತ್ತಿರುವ ಎನ್. ಎಸ್. ಲಕ್ಷ್ಮೀ ನಾರಾಯಣ ಭಟ್ಟ, ಕೆ. ಎನ್. ಶಿವಪ್ಪ ಮೊದಲಾದವರ ಕವನಗಳನ್ನು ವರ್ಗೀಕರಿಸುವುದು ಸುಲಭವಲ್ಲ. 'ನವೋದಯ', 'ನವ್ಯ' ಈ ಹಣೆಪಟ್ಟಿಗಳು ನಿಜವಾಗಿ ಮುಖ್ಯವಲ್ಲ. ಗದ್ಯ ಮಾಡಲಾರದ್ದನ್ನು ಕಾವ್ಯ ಮಾಡುತ್ತದೆ. ಏಕೆಂದರೆ ಭಾಷೆಯ ವಿಶಿಷ್ಟ ಬಳಕೆಯಿಂದ, ಪ್ರತಿಮೆ ಸಂಕೇತಗಳಿಂದ, ಗದ್ಯದ ಭಾಷೆಗೆ ನಿಲುಕದ ಅನುಭವವನ್ನು ಓದುಗನಿಗೆ ಮಾಡಿಕೊಡುತ್ತದೆ.

''ಆಧುನಿಕ ಕನ್ನಡ ಕಾವ್ಯದ ಎಲ್ಲ ಘಟ್ಟಗಳಲ್ಲಿಯೂ ಜಾನಪದದ ನಂಟು ಇರುವುದನ್ನು ನೆನಪಿಡಬೇಕಾದ ಅಂಶ. ಬೇಂದ್ರೆ, ಕಂಬಾರ, ಚೆನ್ನಣ್ಣ ವಾಲೀಕಾರ ಮೊದಲಾದವರ ಕವನಗಳಲ್ಲಿ

ಇದು ಸ್ಪಷ್ಟವಾಗಿದ್ದರೆ , ಇತರೆಡೆಗಳಲ್ಲಿ ಅದು ಗುಪ್ತಗಾಮಿನಿ. ಬದುಕಿನ ಅನುಭವಗಳನ್ನು ತೋಡಿಕೊಳ್ಳುವಾಗ ವಸ್ತುವಿನ ವಿಷಯದಲ್ಲಾಗಲಿ, ಭಾಷೆಯ ವಿಷಯದಲ್ಲಾಗಲಿ ಅತೀ ಸಂಕೋಚವನ್ನಿಟ್ಟುಕೊಳ್ಳದೆ, ವ್ಯಕ್ತಿ ಜೀವನವನ್ನು ಒಟ್ಟು ಜೀವನದ ಸಂದರ್ಭದಲ್ಲಿ ನೋಡಿ ಚಿಂತನೆಯ ಅಂಶವನ್ನು ಅರಗಿಸಿಕೊಂಡಿರುತ್ತದೆ. ಜನಪದ ಕಾವ್ಯ, ಪ್ರಿಯಕರ, ಪ್ರೇಯಸಿಯರ ವಿಷಯವನ್ನಾಗಲಿ, ತಾಯಿ-ಮಗಳ ವಿಷಯವನ್ನಾಗಲಿ, ಪಾಳೆಗಾರ-ಪ್ರಜೆಯ ವಿಷಯವನ್ನಾಗಲಿ, ಹೇಳುವಾಗ ಅದು ಕಾವ್ಯ ಒಂದು ಮೌಲ್ಯ ಶ್ರೇಣಿಯನ್ನು ಅಂತರ್ಗತ ಮಾಡಿಕೊಂಡಿರುತ್ತದೆ. ಇಂತಹ ಕಾವ್ಯದ ಸಂಪರ್ಕ ಯಾವ ಭಾಷೆಯ ಕಾವ್ಯಕ್ಕಾದರೂ ಆರೋಗ್ಯಕರವಾದದ್ದು.''[1]

ಇಂದು ಕನ್ನಡ ಸಾಹಿತ್ಯದ ಎಲ್ಲಾ ಸಾಹಿತಿಗಳು ನವ್ಯ ಸಾಹಿತ್ಯದಲ್ಲಿ ಹರಿಯುತ್ತಿದ್ದರೂ ಕೂಡ ಸಿದ್ಧರಾಮ ಪೋಲೀಸ ಪಾಟೀಲರು ಅನುಸರಿಸದೆ ರಮ್ಯ ಕವನಗಳನ್ನು ರಚಿಸಿದ್ದಾರೆ. ಮೊದಲ ಕವನವಾದ '' ನಾನೂ ನಮ್ಮಪ್ಪನ್ಹಾಂಗಽ'' ಎಂದು ಅಭಿಮಾನದಿಂದ ಹೇಳಿಕೊಂಡು, ತಮ್ಮ ಕವನ ಸಂಕಲನಕ್ಕೆ ಅದೇ ಹೆಸರನ್ನಿಟ್ಟಿದ್ದಾರೆ. ಇವರು ತಮ್ಮ ''ಭಾವ ಕ್ಯಾಮರಾ'' ದಲ್ಲಿ ಸೆರೆ ಹಿಡಿದ ದೈವ, ಭಕ್ತಿ, ಸಂಪ್ರದಾಯ, ಸ್ನೇಹತೆ ಇತ್ಯಾದಿ ಸಂಗತಿಗಳಿಗೆ ಕೊರತೆಯಿಲ್ಲ. ಇವರ ಶೈಲಿ ತುಂಬ ಸರಳವಾಗಿದ್ದು ಜನರ ಮನಮುಟ್ಟುವಂತಿದೆ. ''ನಾನೂ ನಮ್ಮಪ್ಪನ್ಹಾಂಗಽ'' ಎಂದು ರಾಗ ಎಳೆಯುವಲ್ಲಿಯೂ ಕೂಡ ನವ್ಯತೆಯ ನೆರಳಿದೆ. ಇವರ ಕವನಗಳನ್ನು ಅವಲೋಕಿಸಿದಾಗ ಜಾನಪದ ಮತ್ತು ಶಿಷ್ಟ ರೂಪದ ಸಮ್ಮಿಶ್ರ ಶೈಲಿಯನ್ನು ಕಾಣಬಹುದು.

ಇವರು ಇಂಜೀನಿಯರ ವೃತ್ತಿಯಲ್ಲಿದ್ದರೂ ಕೂಡ, ಹುಟ್ಟು ಪ್ರತಿಭೆಯಿಂದ ಇವರು ಸಾಧಕ ಕವಿಗಳಾಗಿದ್ದರು. ಜನಮಧ್ಯದಲ್ಲಿದ್ದುಕೊಂಡು ತಮಗಾದ ಅನುಭವಗಳನ್ನು ಕಾವ್ಯಮಾಧ್ಯಮದ ಮೂಲಕ ಸುಂದರವಾಗಿ ಅಭಿವ್ಯಕ್ತಪಡಿಸುತ್ತ, ಸಾಹಿತ್ಯದ ಸಾರಸ್ವತ ನೀಡುತ್ತಿದ್ದಾರೆ.

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು, ವಿದ್ಯಾರ್ಥಿ ಜೀವನದಲ್ಲಿ ತಮ್ಮ ಸೃಜನ ಶೀಲ ಶಕ್ತಿಯನ್ನು ತೋರಿಸಿ, ಅಂದಿನಿಂದ ಇಂದಿನವರೆಗೆ ಬರೆಯುವ ಪ್ರವೃತ್ತಿಯನ್ನು ಹೆಚ್ಚಿಸುತ್ತಾ ಪೋಷಿಸಿಕೊಂಡು ಬಂದಿದ್ದಾರೆ. ಮೂರು ವೈವಿಧ್ಯಮಯ ಕೃತಿಗಳನ್ನು ಸಾರಸ್ವತ ಪ್ರಪಂಚಕ್ಕೆ ನೀಡಿ, ಓದುಗರ ಮೆಚ್ಚುಗೆ ಗಳಿಸಿದ್ದಾರೆ. ಅವುಗಳೆಂದರೆ,

1. ನಾನೂ ನಮ್ಮಪ್ಪನ್ಹಾಂಗಽ,

---

1. ಹೊಸಗನ್ನಡ ಸಾಹಿತ್ಯ - ಎಲ. ಎಸ್. ಶೇಷಗಿರಿರಾವ. ಪು. ಸಂ. 134.

2. ನೀನೊಮ್ಮೆ ಸತ್ತು ನೋಡು,

3. ಮತ್ತೇಕೆ ಮೂಕ ವೇದನೆ.

**ನಾನೂ ನಮ್ಮಪ್ಪನ್ಹಾಂಗS :**

ಇವರ ಮೊಟ್ಟ ಮೊದಲ ಕವನ ಸಂಕಲನ **'ಎಲೆಯ ಮರೆಯ ಕಾಯಿಯಂತೆ'** ಇರುವ ನೂರಾರು ಕವನಗಳು ಕೈ ಬರಹ ಪುಸ್ತಕದಲ್ಲಿಯೇ ಇದ್ದಿದ್ದನ್ನು ಕಂಡು, ಶಾಂತರಸರು ಪ್ರಕಟ ಪಡಿಸಲು ಒತ್ತಾಯಿಸಿದರು. ಆ ಮಾತಿಗೆ ಪಾಟೀಲರು ಒಪ್ಪಿಕೊಂಡು, ಧೈರ್ಯವಾಗಿ ಪ್ರಥಮ ಕವನ ಸಂಕಲನ **'ನಾನೂ ನಮ್ಮಪ್ಪನ್ಹಾಂಗS'** ಎನ್ನುವ ತಲೆಬರಹದೊಂದಿಗೆ ಕನ್ನಡ ಸಾರತ್ವದ ಪ್ರಪಂಚಕ್ಕೆ ನೀಡಿದುದು ಹೆಮ್ಮೆಯ ವಿಷಯವಾಗಿದೆ.

ಈ ಸಂಗ್ರಹ ಹಲವಾರು ಭಾವಗೀತೆಗಳಿಂದ ಕೂಡಿದೆ. ಕಾವ್ಯವಸ್ತುವನ್ನು ಅರಸುತ್ತ ಕವಿ ಪ್ರಜ್ಞೆ ಅಂತರಂಗದ ಆಳಕ್ಕೆ ಇಳಿದಿದೆ. ಒಳ್ಳೆಯ ಅನುಭವಗಳಿಗೆ ಸುಂದರ ಅಭಿವ್ಯಕ್ತಿಯನ್ನು ನೀಡಿ ಭಾವನಿಷ್ಠ ಕಾವ್ಯವೆನಿಸಿದೆ. ಇಲ್ಲಿ ಕವಿಯ 'ಭಾವ' ಪ್ರಧಾನ; ಸಂಕ್ಷಿಪ್ತತೆ, ಚಿರಂತನತೆ, ಗೇಯತೆಗಳೂ ಸೇರಿಕೊಂಡು ವೈಯಕ್ತಿಕ ಅನುಭವ ಆನಂದಗಳ ಜೊತೆಗೆ ಇತರರನ್ನು ಸಂತುಷ್ಟಗೊಳಿಸುವಂತಿವೆ. ಭಾವಕ್ಕೆ ತಕ್ಕ ಭಾಷೆಯ ಶೈಲಿಯನ್ನು ಸೊಗಸಾಗಿ ಬಳಸಿಕೊಂಡಿದ್ದಾರೆ. ನಾದಕ್ಕೆ ಒಪ್ಪುವ ತಾಳ ಲಯಗಳನ್ನು ಬಳಸಿ, ಸಾಮಾನ್ಯರಿಗೂ ಅರ್ಥವಾಗುವ ಪ್ರತಿಮೆಗಳನ್ನು ಬಳಸಿದ್ದಾರೆ. 'ನಾನೂ ನಮ್ಮಪ್ಪನ್ಹಾಂಗS' ಎನ್ನುವ ತಲೆಬರಹವಂತೂ ಔಚಿತ್ಯಪೂರ್ಣವಾಗಿದೆ.

> **''ರಸಿಕತೆಯು ಎನಗುಂಟು, ಶ್ರಮವಹಿಸಲೂ ಸಿದ್ಧ**
> **ವ್ಯಸನ ಒಂದೇ ಒಂದು 'ರೀಲು' ಇಲ್ಲ.''**[2]

ಎಂದು ವಿನಮ್ರವಾಗಿ ತಮ್ಮ 'ಭಾವ ಕ್ಯಾಮರಾ' ಎಂಬ ಮೊದಲ ಪದ್ಯದಲ್ಲಿ ಕವಿ ಹೇಳಿಕೊಂಡಿದ್ದಾರೆ. ಇವರ ಭಾವಕ್ಯಾಮರಾದಲ್ಲಿ ಸೆರೆ ಹಿಡಿದ ದೈವ ಭಕ್ತಿ, ಸಂಪ್ರದಾಯ, ಸ್ನೇಹ ಇತ್ಯಾದಿಗಳಿಗೆ ಕೊರತೆಯಿಲ್ಲ. ಸರಳ ಶೈಲಿಯಲ್ಲಿ ಲೋಕ ಜೀವನವನ್ನು ವಿವಿಧ ಮಗ್ಗುಲುಗಳಿಂದ ಚಿತ್ರಿಸಿಕೊಂಡು, ಓದುಗರಿಗೆ ನೀಡಬಲ್ಲ ಭಾವ ಕಡಿಮೆಯಾಗಿಲ್ಲ ಎಂದೆನ್ನಿಸುತ್ತದೆ.

> **ಎನ್ನ ಸ್ವಾರ್ಥಕ್ಕಾಗಿ ಹೇಳುತಿಹೆನೆನಬೇಡ**
> **ತಾಯಿ 'ಶಾರದೆ' ಮನಸು ಮುರಿಯಲಿಬೇಡ**
> **ನೀ ಬಾರದೇ ಹೋದರೂ ಹಾನಿ ಎನಗಿಲ್ಲ**
> **ನಿನ್ನ ಅಗಲುವಿಕೆಯ ಚಿಂತೆಯೂ ಇಲ್ಲ''**[3]

---

2. ನಾನೂ ನಮ್ಮಪ್ಪನ್ಹಾಂಗS - ಭಾವ ಕ್ಯಾಮರಾ, ಪು. ಸಂ.-01
3. ನಾನೂ ನಮ್ಮಪ್ಪನ್ಹಾಂಗS - ಹೊಸ ಹುಟ್ಟು, ಪು. ಸಂ.-01

ಪ್ರತಿಭಾಲಾಲನೆಯನ್ನು ತಮ್ಮ ಭಾವದೊಡನೆ ಹೆಜ್ಜೆಯಿಟ್ಟು ಸಹಕರಿಸಲು ಬೇಡುತ್ತಾರೆ. ಆಕೆಯ ಬಿಗುಮಾನ ಹೊಸದಲ್ಲ. ಆದರೂ ಪಾಟೀಲರು ಹತಾಶರಾಗದೆ '' ನೀ ಬಂದರೂ ಸರಿಯೇ ಬಾದಿದ್ದರೂ ಸರಿಯೇ, ಹಿಡಿದ ಹಾದಿಯಿಂದ ನಾ ಹಿಂದಿರುಗಲಾರೆ'' ಎಂದು ಕೆಚ್ಚಿನ ನುಡಿ ನುಡಿಯುತ್ತಾರೆ. ಶಾರದೆಗೆ ಮಗುವೊಂದು ಬೇಕೆಂಬ ಪಟ್ಟು ನಾವಿಬ್ಬರೂ ಸೇರಿ ಹೊಸದೊಂದು ಹುಟ್ಟು ಎಂದು ಹೆಮ್ಮೆಯಿಂದ ಆಕೆಯನ್ನು ಕರೆಯುತ್ತಾರೆ. ಕವನ ಬರೆಯುವಾಗ ಅಭೀಪ್ಸೆಯ ತುಡಿತದ ಮೊದಲಲ್ಲಿ ಪ್ರತಿಭೆ, ಭಾವಾವೇಶಗಳ ಈ ಜಗ್ಗಾಟ ಸಹಜವಾದುದು.

''ನಂಬೀಗ್ರು, ಬಿಜ್ರು, ನೊಡ್ದವ್ರೆಲ್ಲಾ
ನಂಗ ನೋಡಿ, ಹಿಂಗ ಅಂತಾರಲ್ಲಾ
'ನಿಂಗ ನೋಡಿದ್ರ, ಥೇಟ ನಿಮ್ಮಪ್ಪಗ ನೋಡ್ದ್ಹಾಂಗS
ಚೇರಾ ಪೂರಾ, ತದ್ರೂಪ ನಿಮ್ಮ ಅಪ್ಪನ್ಹಾಂಗ
ಕಣ್ಣು, ಮೂಗ ನೆಟ್ಟಗ, ಮ್ಯಾಗ
ಮನಸ್ಯಾನೂ ಹಾಂಗೇ ತೆಳ್ಳಗೆ
ಹಿಂಗನ್ನೋದು ಕೇಳಿ, ನಂಗೂ ಭಾರಿ ಖುಷಿ
ಮತ್ತ್ಯಾಕೋ ಒಳಗೊಳಗ ಜೀವ ಕಸಿವಿಸಿ.
ನಮ್ಮಪ್ಪನ್ಹಾಂಗೇ, ಜಲ್ದೀ ಹಲ್ಲು ಬಿದ್ದು,
ಐವತ್ತಕ್ಕೆ, ಕಣ್ಣಿಗಿ, ಪರೀS ಬಂದು, ಕಂತ್ರೀ
ಹಲ್ಲು, ಬಾಯೊಳಗ ತುರುಕಿ
ಕಣ್ಣೀಗಿ ನಂಬರದ ಚಾಳೀಸು ಹಾಕಿ,
ಕೂಡ್ಬೇಕಲ್ಲ ಮೂಲ್ಯಾಗ
ತಲೀ ಎಲ್ಲಾ ಆಗ್ತಾದ ಬೆಳ್ಳಗ
ಬ್ಯಾಗನೇ ಮುದುಕಾದ್ರ, ಹ್ಯಾಂಗ ?'

ಅಪ್ಪನ ಕಾಲದ ಪ್ರಾಸದ ಮೋಡಿಗೆ ಬಲಿ ಬಿದ್ದು, ಅದು ಹಲವಾರು ಕಡೆ ಹುಚ್ಚು ಮೋಹ ಎನ್ನಿಸುವಂತಾಗಿದೆ. ಹೊಸ ಪರಿಸರದ ಕಾವ್ಯ ರಚಿಸಬೇಕೆಂದು ತಳಮಳಗೊಂಡು ಮತ್ತೇ ಹಳೆಯ ಜಾಡಿಗೆ ವಾಲಿದ್ದಾರೆ. ಹಳೆಯ ಸಂಪ್ರದಾಯಗಳನ್ನು ಮೆಟ್ಟ ಹಾಕಿ ಅಪ್ಪನನ್ನು ಮೀರಿಸಿ ಹೊಸದಾದವುಗಳನ್ನು ಸ್ವಾಗತಿಸುವ ಮನೋಭಾವ ತಳೆದಿದ್ದಾರೆ.

ಸರ್ವಜ್ಞನ ಹಾಗೆ ಖಂಡ ತುಂಡ ಮಾತುಗಳಿಂದ ಕೂಡಿದ ತ್ರಿಪದಿಯಲ್ಲಿಯ ಸತ್ಯಜ್ಞನ ವಚನಗಳು ಕವಿಯ ಲೋಕಾನುಭವವನ್ನು ಸಾರುತ್ತದೆ. ಶೀಲ ಸಂಸ್ಕೃತಿಗೆ ಮನ್ನಣೆಯಿತ್ತು ಜೀವನದ ಮೌಲ್ಯಗಳನ್ನು ಎತ್ತಿ ಹಿಡಿದಿದ್ದಾರೆ. ಅಲ್ಲಲ್ಲಿ ಅಣಕವಾಡಿದ್ದಾರೆ.

4. ನಾನೂ ನಮ್ಮಪ್ಪನ್ಹಾಂಗS - ನಾನೂ ನಮ್ಮಪ್ಪನ್ಹಾಂಗ- ಪು. ಸಂ.-41

''ಕಲಬೆರಕೆಯ ಗುಣವು ಕಲೆತಿಹುದು ರಕ್ತದಲಿ
ಛಲಕೊಟ್ಟು ರಕ್ತ ಶುದ್ಧಗೊಳಿಸುವ ಗುಣವ
ಕಲಿಯಬೇಕೆಂದ ಸರ್ವಜ್ಞ''[5]

ಮನುಷ್ಯನ ಮನಸ್ಸು ಕೆಟ್ಟ ಗುಣಗಳಿಂದ ಕೂಡಿವೆ. ಇದರಿಂದ ಅವನ ರಕ್ತ ಕೆಟ್ಟಿದೆ. ಇದನ್ನು ಶುದ್ಧ ಮಾಡಿಕೊಳ್ಳಬೇಕಾದರೆ, ಒಳ್ಳೆ ಗುಣದವನಾಗಬೇಕು ಎಂದಿದ್ದಾರೆ.

ದೇವರು, ದೈವ ಕುರಿತು ಕವಿ ಚರ್ಚಿಸಿದ್ದಾರೆ. ಜ್ಞಾನಿಯಾಗಿ ಡಂಭಾಚಾರದ ಬೂಟಾಟಿಕೆಗಳನ್ನು ಖಂಡಿಸಿದ್ದಾರೆ. ''ತಿಳಿದು ತಾಮಸವಳಿದು ಅನುಭವವಾದಿ ಆರಸಿದೊಡಿಹುದು ಕೂಟ'' ಎಂದು ಅನುಭಾವ ಮಾರ್ಗಸೂಚನೆ ನೀಡಿದ್ದಾರೆ.

''ಜೋಯಿಸನ ಸ್ವಂತ ಭವಿಷ್ಯ'' ಎನ್ನುವ ಕವನದಲ್ಲಿ ತನ್ನ ತಾನರಿಯದ ಪುಸ್ತಕದ ಬದನೆಕಾಯಿಗೆ ಬೆಲೆ ಕೊಟ್ಟ ಪಂಡಿತನ ಪೇಚಾಟವನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

''ಹೇಳು ಹಾಗಾದ್ರೆ, ಇಂದೆಷ್ಟು ಸಿಗಬಹುದು ದಕ್ಷಿಣೆಯ ರೊಕ್ಕ ?
ಗುಣಿಸಿ ಹೇಳಲಾರೆಯಾ ? ನಿನ್ನದೇ ಲೆಕ್ಕ
ಹತ್ತದಾಯಿತೇ ತಲೆಗೆ ? ಏಕೆ ತಡಬಡಿಸುತಿಹೆ?
ಕೇಳಬಾರದಿತ್ತೇ ಈ ಪ್ರಮುಖ ಪ್ರಶ್ನೆ ?
ಏನೆಂದೆ ? ನಿನ್ನ ಜ್ಯೋತಿಷ್ಯ ಪುಸ್ತಕವು
ಅಂತು ಹತ್ತದೆ, ಕಳವಾಗಿ ಹೋಯಿತೆಂದೆಯಾ
ಅದರೊಳಗೇ ಬರದಿತ್ತೇನು ನಾ ಕೇಳ್ದ ಲೆಕ್ಕ ?
ಹಾಗಾದ್ರೆ, ಈಗ ಹೇಳಲು ಬರುವದಿಲ್ಲೆಂದಾಯ್ತು
ಪರವಾ ಇಲ್ಲ ಬಿಟ್ಟು ಬಿಡು, ನೀ ಏನು ಮಾಡುತಿ?
ಅಲ್ಲ ಯಾರೋ ಕಳೆದುಕೊಂಡಿದ್ದ ಗುಣಿಸಿ ನೋಡುವಿ ಮತ್ತೆ !
'ರಟ್ಟು' ತೆಗೆದಾದ್ರೂ ನೋಡಬಾರದೆ, ಪುಸ್ತಕದ ಸುದ್ದಿ
ಯಾಕೆ ? ಜೋಯಿಸರೇ, ಮುಖ ಪೆಚ್ಚಾಗುತಿದೆ
ನಾ ನಿಮ್ಮಗೆ ಪ್ರಶ್ನಿಸಿದ್ದೇ ದೊಡ್ಡ ತಪ್ಪಾಯಿತೆ ?
ನನ್ನ ಕ್ಷಮಿಸಿ; ಶಾಪ ಗೀಪ ಕೊಟ್ಟೀರಿ ಮತ್ತೆ !
ಶಾಪ ಕೊಡಲು ಆ ಪುಸ್ತಕವೇ ಬೇಕೇನು ?''[6]

ಭವಿಷ್ಯ ಹೇಳುವವನಿಗೆ ತನ್ನ ಭವಿಷ್ಯ ತನಗೆ ಗೊತ್ತಿಲ್ಲ. ಅಂತಹವನ ಬೇರೊಬ್ಬರ ಭವಿಷ್ಯ ಹೇಳುವನೇ ? ಎಂದು ಕವಿ ವಿಡಂಬಿಸಿದ್ದಾರೆ . ಪಂಚಾಂಗವೆಂಬ ಪುಸ್ತಕದಿಂದ ಜನರನ್ನು ಮೋಸದಿಂದ ವಂಚಿಸಿ, ಹೊಟ್ಟೆ ಹೊರೆಯುತ್ತಿದ್ದಾನೆ. ಆದ್ದರಿಂದ ಜೋಯಿಸನ ಭವಿಷ್ಯ ನಂಬಬಾರದೆಂದು ಕವಿಯ ಆಶಯ.

'ತಾಜಿಗಾಗಿ ತಿಕ್ಕಾಟ' ಕವನದಲ್ಲಿ ಜಾತಿ ಮತ ಬಂಧನ ಬಿಡಿಸಿ ಹಿಂದು ಮುಸ್ಲಿಂರ ಸಂಗಮಕ್ಕೆ ಮಾರ್ಗ ತೋರಿಸಿ ಸೌಂದರ್ಯ ಪ್ರಜ್ಞೆ ಮೆರೆದಿದ್ದಾರೆ.

---

5. ನಾನೂ ನಮ್ಮಪ್ಪನ್ಹಾಂಗS - ಸತ್ಯಜ್ಞನ ವಚನಗಳು, ಪು. ಸಂ.-38
6. ನಾನೂ ನಮ್ಮಪ್ಪನ್ಹಾಂಗS - ಜೋಯಿಸನ ಸ್ವಂತ ಭವಿಷ್ಯ, ಪು. ಸಂ.-06

"ಸೌಂದರ್ಯದಾಗರಕೆ, ಜಾತಿ ಮತ ಬಂಧನವೇ?
ಸತ್ಯಂ ಶಿವಂ ಸುಂದರಂ, ಎಲ್ಲ ಒಂದಲ್ಲವೆ?
ಆನಂದ ತೃಪ್ತಿಯೇ ಮನುಜತ್ವದ ಧ್ಯೇಯ
ಸುಮ್ಮನೆ ಕೆಡಿಸಿಕೊಳ್ಳದಿರು, ನಿನ್ನ ತಲೆಯ"[7]

ಸೌಂದರ್ಯದ ವಸ್ತು ಯಾರಾದರೂ ಬಳಸಿಕೊಂಡು, ಆನಂದಿಸಬಹುದು. ಸತ್ಯಂ, ಶಿವಂ, ಸುಂದರಂ ಎಲ್ಲ ಒಂದೆ. ಹುಟ್ಟಿದ ಎಲ್ಲ ಮನುಜರು ಒಂದೇ ಇದ್ದು, ಭೇಧ-ಭಾವವೇಕೆ? ಎಂದು ಕವಿ ಕೇಳುತ್ತಾರೆ. 'ತಾಜಮಹಲ್' ಇದು ಮುಸ್ಲಿಂರ ಮಸಿದಿಯೆಂದು ಅವರೇ ಇಟ್ಟುಕೊಳ್ಳಬಹುದೆ! ಇಲ್ಲ. ಅದು ಹಿಂದುಗಳೂ ಕೂಡಾ ಸೌಂದರ್ಯದ ವಸ್ತುವಾಗಿ ಉಪಯೋಗಿಸಬಹುದು.

ನಮ್ಮ ಮುಖಂಡರು ಸಾರುವ ಗುರಿ ಮುಟ್ಟದ **"ಗರೀಬಿ ಹಟಾವೋ"**ದಂಥ ಬರಿಯ ಗೊಳ್ಳು ಘೋಷಣೆಗಳನ್ನು **'ತುರ್ಕರ ಹೆಣ'** ಎಂಬ ಕವನದಲ್ಲಿ ಸುಂದರ ಪ್ರತಿಮೆಗಳೊಂದಿಗೆ ಮನಂಬುಗುವಂತೆ ಚಿತ್ರಿಸಿದ್ದಾರೆ.

"ಹೆಣ ಹೊರವು ಯಾರೂ ಖಾಯಂ ಇಲ್ಲ
ಖಾಯಂ ಹೊರಬೇಕಂತಂದ್ರ ರೂಲು ಇಲ್ಲ
ಒಬ್ಬೊಬ್ರೆ ಬರ್‍ತಾರ, ಹೆಗಲ ಕೊಡ್ತಾರ,
ಹೇಳಲಾರ್ದೆ ಜಾರಿ ವಾರ್‍ಯಾಗಿ ಹೋಗ್ತಾರ,
ಹೆಣ ಮಾತ್ರ ನಡಬಾರಕ ನಿಂದ್ರಲ್ಲ;
ಖಬರಸ್ತಾನಕ ಮುಟ್ಟತಾದ ಖಾತ್ರಿ"[8]

ಹೆಣ..... ಸರಕಾರಕ್ಕೆ ಹೋಲಿಸಿ, ಚುನಾವಣೆಗೆ ಯಾರು ಬೇಕಾದರೂ ನಿಂತು ಗೆಲ್ಲಬಹುದು. ಇವರೇ ಸರಕಾರ ನಡೆಸಬೇಕೆಂದು ಖಾಯಂ ರೂಲೂ ಇಲ್ಲ. ಒಬ್ಬರಾದ ನಂತರ ಮತ್ತೊಬ್ಬರು ರಾಜಕೀಯ ಮುಖಂಡರು ಬರುತ್ತಾರೆ, ಹೋಗುತ್ತಾರೆ. ಆದರೆ ಖಾಯಂ ಮಾತ್ರ ಯಾರೂ ಇಲ್ಲ. ಅಂದರೆ ಸರಕಾರ ನಿಲ್ಲುವುದಿಲ್ಲ, ನಿರಂತರವಾಗಿ ನಡೆಯುತ್ತದೆ.

"ಬೇಡನ ಬಾಣಕ್ಕೆ ತುತ್ತಾಗಿ ಪಕ್ಷಿ,
ಮೂಡಿಸಿತ್ತು ಮೂಲ ರಾಮಾಯಣ
ನಿರುದ್ಯೋಗದಿ ಬಳಲಿ ಬೆಂದ ಈ ಪ್ರಾಣ'
ಬರೆಯಿಸಿತು, ಈ ನವ್ಯ ರಾಮಾಯಣ!'[9]

ನಿರುದ್ಯೋಗ ಸಮಸ್ಯೆಯನ್ನು 'ನವ್ಯ ರಾಮಾಯಣ' ಎಂಬ ಕವನದಲ್ಲಿ ಓದುಗರ ಮನಸೂರೆಯಾಗುವಂತೆ ಎಳೆ ಎಳೆಯಾಗಿ ಬಿಚ್ಚಿ ತೋರಿಸಿದ್ದಾರೆ. ಈ ಕವನ ಕವಿಯ ಆತ್ಮಗೀತೆಯಂತಿದೆ. ವೃಷ್ಟಿ ಪ್ರಜ್ಞೆ, ಸಮಷ್ಟಿ ಪ್ರಜ್ಞೆಗೆ ತಿರುಗಿದೆ. ವಾಸ್ತವಿಕ ಜಗತ್ತಿನ ನಿತ್ಯ ಸತ್ಯ

---

7. ನಾನೂ ನಮ್ಮಪ್ಪನ್ಹಾಂಗS - ತಾಜಗಾಗಿ ತಿಕ್ಕಾಟ ಪು. ಸಂ.-22
8. ನಾನೂ ನಮ್ಮಪ್ಪನ್ಹಾಂಗS - ತುರ್ಕರ ಹೆಣ, ಪು. ಸಂ.-27
9. ನಾನೂ ನಮ್ಮಪ್ಪನ್ಹಾಂಗS - ಪಕ್ಷಿನೀತಿ, ಪು. ಸಂ.-09

ಚಿತ್ರವನ್ನು ಕಣ್ಮುಂದೆ ಕಟ್ಟುವಂತೆ ವರ್ಣಿಸಿದ್ದಾರೆ.

"ಮೆದುಳುಳ್ಳ ಮನುಜಗೆ ಇಲ್ಲ ತಿಳುವಳಿಕೆ ಬುದ್ಧಿ
ಇವನಿಗಿಂತ ಪಕ್ಷಿಗಳಿಗುಂಟು ಹೃದಯ ಶುದ್ಧಿ !"[10]

ಮನುಷ್ಯ ತನ್ನ ಕೆಟ್ಟ ಗುಣಗಳಿಂದ ಬೇರೊಬ್ಬರನ್ನು ನಾಶ ಮಾಡುತ್ತಾನೆ. ಅವನ ಏಳ್ಗೆ ಸಹಿಸಿಕೊಳ್ಳುವುದಿಲ್ಲ. ಹೊಟ್ಟೆ ಕಿಚ್ಚು ಪಡುತ್ತಾನೆ. ಆದರೆ ಪಕ್ಷಿಗಳು ತಮ್ಮ ಪಾಡಿಗೆ ತಾವು ಇದ್ದುಕೊಳ್ಳುತ್ತವೆ. ಮನುಷ್ಯ ತನ್ನ ಮಲಿನ ಮನಸ್ಸಿನಿಂದ ಕ್ಷುದ್ರನಾಗಿದ್ದಾನೆ ಎಂದಿದ್ದಾರೆ. ಕಾಮುಕ ಪ್ರವೃತ್ತಿಯ ರಾಕ್ಷಸಿ ವೃತ್ತಿಯ ಮನುಷ್ಯ ಅವನೊಬ್ಬ ಮತ್ಸರವೇ ಮೂರ್ತಿವೆತ್ತ ದನುಜ ಎಂದೂ ಕರೆದಿದ್ದಾರೆ. ಕಾಗೆ - ಕೋಳಿಗಳು ಮನುಷ್ಯನಿಗಿಂತಲೂ ಶ್ರೇಷ್ಠ ಎನ್ನುವ ಮಾತನ್ನು ಸಂಸ್ಕೃತ ಸುಭಾಷಿತಕಾರರು ಶರಣರು ಹೇಳಿದಂತೆ ಇಲ್ಲಿ ಕವಿ "ಪಕ್ಷಿ ನೀತಿ" ಕವನದಲ್ಲಿ ಪ್ರತಿಪಾದಿಸಿದ್ದಾರೆ.

"ರಣ ಕಣಕೆ ಇಳಿದಾಗ, ಹಿಂದು ಮುಂದೆನ್ನುವದೆ ?
ಅದಕಾಗಿ ಕಟ್ಟಿಕೋ, "ಧೈರ್ಯ," ಕುಂಬಳಕಾಯಿ
ಈಜಿ ಬಾ ದಡಕೆ, ಸುಮ್ಮನೆ ಬಿಡದೆ ಬಾಯಿ"[11]

ಸಮಾಜಕ್ಕಂಜಿ ಮನುಷ್ಯ ಅಧೈರ್ಯದಿಂದ ಕುಳಿತರೆ ಒಳ್ಳೆಯ ಜೀವನ ರೂಪಿಸುವುದಕ್ಕಾಗುವದಿಲ್ಲ. ಬದುಕಿನಲ್ಲಿ ಎಂಥ ಕಠಿಣ ಸ್ಥಿತಿ ಒದಗಿ ಬಂದರೂ, ತಾಳ್ಮೆಯಿಂದ ಸಹಿಸಿ ಧೈರ್ಯವಾಗಿ ಅದನ್ನು ಎದುರಿಸಬೇಕೆಂದು 'ಕವನ ಕೂಸು' ಎಂಬ ಕವನದಲ್ಲಿ ಹೇಳಿರುವುದನ್ನು ಕಾಣಬಹುದು.

"ಅವಸರವೂ ತರವಲ್ಲ, ಅತಿ ತಾಳ್ಮೆಯೂ ಹೊಲ್ಲ
ಸಮಯ ಸಾಧಿಸಿ ಬಹು ಎಚ್ಚರಿರಬೇಕು.
ಆ ವೇಳೆ ಬಂದೊದಗೆ, ಹಿಂದು ಮುಂದೆಣಿಸದಲೆ
ತಪ್ಪದೆ ಗಪ್ಪನೇ ತಿಂದು ಹಾಕು"[12]

ನಮಗೆ ಸಿಕ್ಕ ಅವಕಾಶವನ್ನು ಉಪಯೋಗಿಸದೇ ಇದ್ದಲ್ಲಿ, ಅನಾಹುತ ತಪ್ಪಿದ್ದಲ್ಲ, ಅತಿ ತಾಳ್ಮೆಯೂ ಸರಿಯಲ್ಲ. ಅವಸರವೂ ಹಿತವಲ್ಲ. ಸಮಯಕ್ಕೆ ತಕ್ಕ ಹಾಗೆ ಇರಬೇಕೆಂದು 'ಸಮಯ ಸಾಧನೆ ಎಂಬ ಕವನದಲ್ಲಿ ಕಾಣಬಹುದು.

"ಕೇಳಿಸದು ಇಲ್ಲೆಲ್ಲೂ ಅಲ್ಲನಿರುವಾ ಸೊಲ್ಲು
ಮಸೀದೆ ಮಂದಿರದಿ ಈಗಿಹುದು ಬರಿಕಲ್ಲು
ಭಕ್ತರ ಭಜನೆ, ಮುಲ್ಲಾಗಳ ಕೂಗು ವ್ಯರ್ಥವೆಲ್ಲ.
ಸುಮ್ಮನೇ ಹುಡುಕಿ ಸಾಯ್ವರು, ಶಿವನು ಇಲ್ಲಿಲ್ಲ.
ಮುಗ್ಧ ಮಕ್ಕಳ ಆಟ, ಬೆಳ್ದಿಂಗಳ ನೋಟ ಇವು ಶಿವನ ಬೇಟ
ತಿಳಿದು ತಾಮಸವಳಿದು, ಅನುಭವದಿ ಅರಿಸಿ ದೊಳಿಹುದು ಕೂಟ."[13]

10. ನಾನೂ ನಮ್ಮಪ್ಪನ್ಹಾಂಗS - ಪಕ್ಷಿ ನೀತಿ, ಪು. ಸಂ.-09
11. ನಾನೂ ನಮ್ಮಪ್ಪನ್ಹಾಂಗS - ಕವನ ಕೂಸು, ಪು. ಸಂ.-02
12. ನಾನೂ ನಮ್ಮಪ್ಪನ್ಹಾಂಗS - ಸಮಯ ಸಾಧನೆ, ಪು. ಸಂ.-03
13. ನಾನೂ ನಮ್ಮಪ್ಪನ್ಹಾಂಗS - ಅಲ್ಲಾ ಎಲ್ಲಿಹ?, ಪು. ಸಂ.-07

"ಅಲ್ಲಾ ಎಲ್ಲಿಹ?" ಕವನದಲ್ಲಿ ಮನುಷ್ಯನ ಢಾಂಬಿಕ ಭಕ್ತಿಯನ್ನು ಚಿತ್ರಿಸಿದ್ದಾರೆ. ಭಕ್ತಿಯ ಹೆಸರಲ್ಲಿ ಪರಿಸರ ನಾಶ ಮಾಡುವ ಭಕ್ತನ ಭಕ್ತಿ, ಭಕ್ತಿಯೇ ಅಲ್ಲ. ಇದು ಮಕ್ಕಳ ಆಟ, ಬೆಳ್ದಿಂಗಳ ನೋಟ. ಇಂಥವುಗಳಲ್ಲಿ ಮಾತ್ರ ನಾವು ಶಿವನನ್ನು ಕಾಣಬಹುದೆಂದು ಪ್ರತಿಪಾದಿಸಿದ್ದಾರೆ.

> "ಪ್ರೇಯಸಿಯ ಅಗಲಿ ಪರಿತಪಿಸುತಿಹ ಇವನೊಬ್ಬ
> ಮೌನದೊಳೇ ಮನದಿ ಕೊರಗಿ, ಸೊರಗುತಿಹ 'ವಿರಹಿ'
> ಶರೀರದಾ ಮೇಲಿಲ್ಲ ಇವರಿಗೆಷ್ಟೂ ಪರಿವಿ
> ಹಗಲಿರುಳೂ ಅವಳದೇ ಧ್ಯಾನ, ತಲೆಗೆ ಮಬ್ಬು
> ಆಗೋ, ಬೇರೊಬ್ಬ ಇವನಂತೆ ಕುಳಿತಿಹನಲ್ಲಿ
> ದೇವನೊಲುಮೆಗೆ ತಪಗೈವ ಇವನು 'ವಿರಾಗಿ'
> ಆತ್ಮ ಪರಮಾತ್ಮರೈಕ್ಯವೇ ನಿಜ ಗುರಿಯಾಗಿ
> ದೇಹ ಸವೆಸಿತಿಹ ನಿತ್ಯ ದೇವ ಧ್ಯಾನದಲ್ಲಿ
> ಸರಿ ; 'ವಿರಹಿ' ವಿರಾಗಿಗೆ ವ್ಯತ್ಯಾಸವೇನುಂಟು ?
> ಇಬ್ಬರದೂ ಗುರಿಯೊಂದೇ ಮೂರ್ತಿ ಬೇರುಂಟು !"[14]

ವಿಷಯ ಬೇರೆ ಬೇರೆಯಾದರೂ ಗುರಿ ಯೊಂದೇ ಎಂಬ ಮಾತನ್ನು ಭಕ್ತ ಮತ್ತು ಪ್ರಿಯತಮನ ವ್ಯತ್ಯಾಸವನ್ನು 'ವಿರಹಿ-ವಿರಾಗಿ' ಎಂಬ ಕವನದಲ್ಲಿ ಸಾದರಪಡಿಸಲಾಗಿದೆ.

> "ಹುಟ್ಟು ಪ್ರತಿಬೆಯು ಇಲ್ದೆ ಹೊಟ್ಟೆಪಾಡಿಗೆ ಬರೆದು
> ಬಿಟ್ಟಿ ಕೆಲಸವನ್ನು ಮಾಡಿದನ ಸಾಹಿತ್ಯ
> 'ಬುಟ್ಟಿಕಸ' ವೆಂದ ! ಸತ್ಯಜ್ಞ"[15]

ಕವಿ ಸಿದ್ಧರಾಮು ಪೋಲೀಸ ಪಾಟೀಲರು ಮುದ್ದಾಂ ಕವಿಗಳಲ್ಲ. ಸಹಜ ಕವಿಗಳು ಎಂಬುದನ್ನು ಅವರ ಕವನಗಳೇ ಸಾರುತ್ತವೆ. ಅಂಥ ಆತ್ಮ ವಿಸ್ವಾಸವೂ ಅವರದು.

> "ಕವಿ ಕೆಚ್ಚು ನೋಡುವಡೆ, ಸವಿಬೇಕು ಕವನಗಳ
> ಸವಿಯದಲೆ, ಜಾತಿ ಮತ ಹಿಡಿದು ತೆಗಳಿದರೆ
> ಕಿವಿ ಹಿಂಡಬೇಕು ಸತ್ಯಜ್ಞ"[16]

ಕವಿಯ ಕವನಗಳ ಸತ್ವ ತಿಳಿಯಬೇಕಾದರೆ ಒಳಹೊಕ್ಕು ಓದಬೇಕು. ಓದಿದ ನಂತರ ಜಾತಿ ಮತ ಎಂದು ಹಿಡಿದುಕೊಂಡು ಟೀಕಿಸುವವರನ್ನು ಕಿವಿ ಹಿಂಡಬೇಕು ಎಂದಿದ್ದಾರೆ. ರಾಘವಾಂಕ ಹೇಳಿದಂತೆ "ಎಡೆವಾಯ್ದು ಬಂದ ತಪ್ಪಂ ಹಿಡಿದು ಸಾಧಿಸದೆ ಕಡೆತನಕ ಬಂದ ಲೇಸಿಂಗೆ ತಲೆದೂಗೆ ತಲೆಯೊಡೆವುದೇ" ಎಂದು ಕವಿ ಖಾರವಾಗಿ ಹೇಳಿದ್ದಾರೆ.

---

14. ನಾನೂ ನಮ್ಮ ಪ್ಪಸ್ನಾಂಗs -ವಿರಹಿ-ವಿರಾಗಿ, ಪು. ಸಂ.-12
15. ನಾನೂ ನಮ್ಮ ಪ್ಪಸ್ನಾಂಗs - ಸತ್ಯಜ್ಞನ ವಚನಗಳು, ಪು. ಸಂ.-40
16. ನಾನೂ ನಮ್ಮ ಪ್ಪಸ್ನಾಂಗs - ಸತ್ಯಜ್ಞನ ವಚನಗಳು, ಪು. ಸಂ.-40

ಈ ಸಂಕಲನದ ಕೆಲವು ಕವನಗಳಲ್ಲಿ ಸಾಮಾಜಿಕ, ರಾಜಕೀಯ ಅನೀತಿ, ಅನ್ಯಾಯಗಳು ಚಿತ್ರಿತವಾಗಿದ್ದರೆ, ಕೆಲವಡೆ ವಿಡಂಬನೆ, ಹಾಸ್ಯ, ಉಪದೇಶಗಳೂ ಮೂಡಿಬಂದಿವೆ. 'ತುರ್ಕರ ಹೆಣ' 'ನವ್ಯ ರಾಮಾಯಣ', ದಂಥ ಕವನಗಳಲ್ಲಿ ಕವಿಯ ಸಿಡುಕು ಒಡ ಮೂಡಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಅರ್ಹತೆಗೆ ಬೆಲೆಯಿಲ್ಲ. ಆದರೆ ಹಣಕ್ಕೆ ಅಧಿಕಾರಕ್ಕೆ ಬೆಲೆಯಿದೆ. ಎಂಬುದನ್ನು ತೋರಿಸಲಾಗಿದೆ. ನಮ್ಮ ನಾಯಕರು ಅಜ್ಞಾನಿಗಳಾದ ಜನಸಾಮಾನ್ಯರನ್ನು ಸುಳ್ಳು ಭರವಸೆಗಳಿಂದ ಮೋಸಗೊಳಿಸುವರೆಂಬುದು ಕವಿ ಕಂಡ ಸತ್ಯ. ಆ ದೃಷ್ಟಿಯಿಂದ ಈ ಎರಡೂ ಕವನಗಳು ಸಫಲವಾಗಿವೆ. ನಮ್ಮ ಸಮಾಜದಲ್ಲಿಯ ಶೋಷಕರ ಪ್ರತಿನಿಧಿಯಾಗಿ ಭವಿಷ್ಯವಾದಿ ಇಲ್ಲಿ ಚಿತ್ರಿತವಾಗಿರುವನು ತನ್ನ ಭವಿಷವನ್ನೇ ಅರಿಯದ ಈ 'ಜೋಯಿಸನ ಸ್ವಂತ ಭವಿಷ್ಯ' ಎಂಬುದು ಒಳ್ಳೆಯ ವಿಡಂಬನೆಯಾಗಿದೆ.

## 2. ನೀನೊಮ್ಮೆ ಸತ್ತು ನೋಡು :

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಒಂದು ಸಣ್ಣ ಹಳ್ಳಿಯಲ್ಲಿ ಹುಟ್ಟಿ, ಹಳ್ಳಿಗಳ ಭಾಷೆ, ಪರಿಭಾಷೆಗಳೊಡನೆ ಸಮ್ಮಿಳಿತರಾಗಿ ಜನಪದ ಸೊಗಸುಗಳನ್ನೆಲ್ಲ ತಮ್ಮ ಬರವಣಿಗೆಯಲ್ಲಿ ರೂಢಿಸಿಕೊಂಡಿದ್ದಾರೆ. ಇವರು ಬಾಲ್ಯದಿಂದ ಬಳುವಳಿಯಾಗಿ ಬಂದದ್ದನ್ನು ಹೊಸ ಥಳಕು ಬೆಳಕಿನೆದುರು ಮರೆಯಲಿಕ್ಕೆ ತಯಾರಿಲ್ಲವೆಂಬುದು ಮನೆಯ ನಾಮಾಂಕಿತದಲ್ಲಿ ನೋಡಬಹುದು. ಅವರ ಜೀವನ ಸಾಂಕೇತಿಕತೆಯನ್ನು ಸಂಬಂಧ ಸಾಮೀಪ್ಯಕ್ಕಿಂತಲೂ, ವಿಚಾರ ಸಾಮಿಪ್ಯ ಬಹುಬೇಗ ಹೊಂದಿಸಿಬಿಡುತ್ತದೆ.

ಶ್ರೀ ಪೋಲೀಸ ಪಾಟೀಲರು "ಋಷಿಯಲ್ಲದವರು ಕವಿಯಾಗಲಾರ" ರೆಂಬುದನ್ನು ಗಟ್ಟಿಯಾಗಿ ತಿಳಿದುಕೊಂಡಿದ್ದಾರೆ. ಸತತಾಬ್ಯಾಸವೂ ಕಾವ್ಯರಚನೆಗೆ ಆವಶ್ಯಕವೆಂಬುದನ್ನು ಮನಗಂಡಿದ್ದಾರೆ. ಆದಕ್ಕಾಗಿ ಪಾಟೀಲರೇ ತಮ್ಮನ್ನು ಸಂಭೋದಿಸಿಕೊಂಡು ಹೇಳಿದ್ದೇನೆಂದರೆ.

"ಹೆಚ್ಚಿನ ಗ್ರಂಥ ವ್ಯಾಸಂಗ ಮಾಡದೇ ನಾನು
ಕವಿಯಾಗಬೇಕೆಂಬ ಹುಚ್ಚು ಹಂಬಲದವನು
ಅದು ಹೇಗೆ ಮೂಡಿತ್ತು ಕವನದೊಳು ಕೆಚ್ಚು ?
ಶಬ್ದ ಭಂಡಾರವಿಲ್ಲದಾ ಕವನ 'ಸಪ್ಪಗಿನ ನುಚ್ಚು '"[17]

---

17. ನೀನೊಮ್ಮೆ ಸತ್ತು ನೋಡು, ಬಿ.ಮಹದೇವಪ್ಪನವರ ಮುನ್ನುಡಿಯಿಂದ.

ಇಷ್ಟಾದರೂ ಕವಿಗೆ ಜೀವನಾನುಭವವಿದೆ. ಹಳ್ಳಿಯ ಜೀವನ ಆಳವಾದ ಪ್ರಭಾವವನ್ನುಂಟು ಮಾಡಿದೆಯೆಂಬುದು ಅವರ ಸಾಹಿತ್ಯ ರಚನೆಯ ಪ್ರತಿ ಸಾಲಿನಲ್ಲಿಯೂ ಎದ್ದು ಕಾಣುತ್ತದೆ 'ನೀನೊಮ್ಮೆ ಸತ್ತು ನೋಡು' ಕವನದ ಕೆಲವು ಸಾಲುಗಳಾದ ''ಕಾಲ್ಮೇಲೆ ಕಾಲ್ಹಾಕಿ ಕುರ್ಚಿಯಲಿ ಕುಳಿತು,' 'ಸತ್ತದ್ದು ಬಹಳಲ್ಲ, ಎಷ್ಟೊಂದು ಈ ಗುಲ್ಲ''? ''ಬುಡಕ ಸಿಕ್ಕಿಕೊಂಡವರ ಪಾಡು''. ''ಕಂಕುಳಲ್ಲೊಂದು ಕಂದ'' ದ ಕವನದಲ್ಲಿ ಕೆಲವು ಸಾಲುಗಳಾದ, ಕುಟ್ಟಲಿಕ್ಕೆ ಒಳ್ಳೆ ಖಲಿ, '' ಹೈರಾಣ, ಕಳೀಲಾಕ, ಪ್ಯಾಲಿಹಾಂಗ ಕೂಡಬ್ಯಾಡ್ರಿ, 'ಖ್ಯಾಲ ಇಟ್ಟು ನೋಡ್ರಿ,' 'ಜೋರು ಕೆಲ್ಸ ನಡೆದೈತಿ' ಮುಂದಿನ ಮಾತು ಮುಂದಂತ ದುಂದದಾಗ ಕೂಡಬ್ಯಾಡ್ರಿ, ''ಗೋರಾ ಹೋಗಿ ಕಾಲಾ ಆದ, ಹಕ್ಕಹಲಾಲ, ಮನಸು ಗಲೀಜು, ಗಪ ಅಂತ ಖಲಾಸ ಮಾಡ್ತಾವ, 'ಜೂವಾಬಾಜಿ, ನಿಶಾಬಾಜಿ, ರಾಂಡಬಾಜಿ' ಇವು ಮೂರು, ಯಾವ್ನೇ ಮಾಡ್ಲಿ ಮಣ್ಣುಮುಕ್ಕಿ ಹೊಗ್ತಾನಂವ, ಹುಡುಗ ಹುಡಗಿನ್ನ ಹಿಡಿದಾನ, ಹಾದೀ ಮ್ಯಾಲೇ ಎಳಿತಾನ, ಹುಚ್ಚಪ್ಪ ನೀ ಹಿನ ಎಲ್ಲಿದ್ದೀ, ಮತ್ತೆ ಸಸ್ತಕಾ ರಾಸ್ತಾ ಹುಡ್ಕೋಬೇಕು.'' ಹೀಗೆ ದಿಗ್ಸಂಗಿ ಗ್ರಾಮದ ಭಾಷೆಯನ್ನು ಸಂದರ್ಭ ಬಂದಾಗಲೆಲ್ಲ ಸಹಜವಾಗಿ ಹೇಳಲು ಕವಿ ನಾಚಿಲ್ಲ ಮತ್ತು ಹೇಸಿಲ್ಲ.

ಈಗಾಗಲೇ ಶ್ರೀ ಸಿದ್ಧರಾಮ ಪೋಲೀಸ ಪಾಟೀಲ ಅವರು ಕನ್ನಡ ದೇವಿಗೆ ಮೂರು ಕವನ ಸಂಕಲನಗಳನ್ನು ಅರ್ಪಿಸಿದರೂ, ಕಾವ್ಯ ಕ್ಷೇತ್ರದಲ್ಲಿ ಯಾವ ಬಣಕ್ಕೂ ಅರ್ಪಿಸಿಕೊಂಡವರಲ್ಲ. ಸತ್ಯಜ್ಞನ ವಚನಗಳ ಮೂಲಕ ಸರ್ವಜ್ಞನ ಸ್ವತಂತ್ರ ಮತಿಯನ್ನು ತೋರಿದ ಅವರು, ಕವಿತೆಗಳ ಮೂಲಕವೂ ಅದೇ ,ಬಾವನೆಗಳಲ್ಲಿಯೇ ಲೋಲಾಡಿದ್ದಾರೆ. ಅವರ ಕವಿತೆಗಳಲ್ಲಿ ನವ್ಯ ದೃಷ್ಟಿಕೋನವೂ ಇದೆ. ಬಂಡಾಯದ ಮನೋಧರ್ಮವೂ ಇದೆ. ಸೃಷ್ಟಿಯ ಸೌಂದರ್ಯವು, ನವೋದಯದ ಸ್ತಿಮಿತತೆಯೂ ಇದೆ. ''ಸ್ಟುಡಿಯೋ'', 'ತೊಗಲ ಬಾವಲಿ, ಹೊಸ ತಿರುವು', 'ಸ್ಯೈರ್ಯಾದನಗೋಳು, 'ಹಳೆ ಬಾಂವಿ-ಹೊಸ ನೀರು' ಉತ್ತಮ ನವ್ಯ ಕವನಗಳಾಗಿವೆ. 'ಜಾತ್ಯಾತೀತ ಸಂಘ,' 'ಲುಚ್ಚೆ ಸಾಧುಗಳು' 'ವಯಸ್ಕರ ಶಿಕ್ಷಣ', 'ದನಕಾಯೋದು' ಮೊದಲಾದವುಗಳಲ್ಲಿ ನಾವು ಬಂಡಾಯ ಪ್ರಜ್ಞೆಯನ್ನು ಗುರುತಿಸಬಹುದಾಗಿದೆ. ಯಾವೇ ಪಂಥಗಳು ಬಂದರೂ ಮುಖ್ಯವಾಗಿ ಜನಸಾಮಾನ್ಯರ ಹಿತರಕ್ಷಣೆಗಾಗಿ ಎಂಬುದನ್ನು ತಿಳಿದುಕೊಂಡು ಕಾವ್ಯ ರಚಿಸಿದರೆ ಅದರಲ್ಲಿಯೇ ಸಾರ್ಥಕವಿದೆ. ಇದನ್ನು ಬಿಟ್ಟು ತಮ್ಮ ಹಿಂದೆ ಬರೆದವರನ್ನು ಹೀಗಳೆಯುತ್ತಾ ತಮ್ಮ ಗುಂಪಿಗೆ

ಸೇರದವರನ್ನು ಕವಿಗಳೇ ಅಲ್ಲವೆಂದು ಹೀಯಾಳಿಸುತ್ತಾ ಹೊರಟರೆ, ಕಾವ್ಯ ಕ್ಷೇತ್ರದಲ್ಲಿಯೂ ರಾಜಕೀಯ ಪ್ರವೇಶಿಸಿ ಇಡೀ ಸಾಹಿತ್ಯವನ್ನು ಗಲೀಜುಗೊಳಿಸುತ್ತದೆ. ಶ್ರೀ ಪೋಲೀಸ ಪಾಟೀಲರು ತಮಗನಿಸಿದುದನ್ನು ಅನಿಸಿದಂತೆಯೇ ತೆರೆದಿಡುವ ಎದೆಗಾರಿಕೆಯನ್ನು ಉಳಿಸಿಕೊಂಡಿರುವರೆಲ್ಲಾ ಎಂಬುದೇ ನೆಮ್ಮದಿಯ ವಿಷಯ.

''ಸತ್ತಿದ್ದು ಒಳಿತಾಯ್ತು
ಜನಸಂಖ್ಯೆ ಕಡಿಮಾಯ್ತು
''ಸತ್ತದ್ದು ಬಹಳಿಲ್ಲ
ಎಷ್ಟೊಂದು ಈ ಗುಲ್ಲ ?''
''ಸತ್ತವ್ರು ಸತ್ತೋಗ್ಹೀದ್ರು
ಮತ್ಯಾಕ ಹುಡಕೋದು ?''
''ಸತ್ತರೂ ಸಾಯ್ಲೇಕೆ
ಸೊಕ್ಕು ಬಂದಿದೆ ಜನಕೆ''[18]

''ನೀನೊಮ್ಮೆ ಸತ್ತು ನೋಡು'' ಎಂಬ ಕವನದಲ್ಲಿ ಕವಿಯ ಆಶಯವೆಂದರೆ ಉನ್ನತ ದರ್ಜೆಯಲ್ಲಿದ್ದ ಅಧಿಕಾರಿಗಳಿಗೆ ಜನರ ನೋವು ನಲಿವಿನ ಬಗ್ಗೆ ಗಮನವಿರುವುದಿಲ್ಲ. ಜನ ಕಷ್ಟದಿಂದ ಸಾಯುತ್ತಿರುವಾಗ, ಆ ಜನರ ಕೂಗು ಇವನಿಗೆ ಕೇಳುವುದಿಲ್ಲ ಎನ್ನುತ್ತಾನೆ. ಅದಕ್ಕೆ ಕವಿ, ಸತ್ತವರ ನೋವು ಏನು ಅಂತ ಗೊತ್ತಾಗಬೇಕಾದರೆ, ನೀನ್ಮೊಮ್ಮೆ ಸತ್ತು ನೋಡು ಎನ್ನುತ್ತಾರೆ. ಕವಿಗೆ ಜನಸಾಮಾನ್ಯರ ಹಿತ ರಕ್ಷಣೆಯ ಬಗ್ಗೆ ಇದ್ದ ಕಾಳಜಿ ಕಂಡುಬರುತ್ತದೆ.

'ರಾಷ್ಟ್ರೀಯ ಐಕ್ಯತೆ' ಕವನದಲ್ಲಿ '' ಒಗ್ಗಟ್ಟಿನಲ್ಲಿ ಬಲವಿದೆ'' ಎಂಬ ಗಾದೆ ಮಾತಿನಂತೆ ರಾಷ್ಟ್ರದಲ್ಲಿ ಐಕ್ಯತೆಯಿರಬೇಕೆಂದು ಹೇಳುತ್ತಾರೆ. 'ಜನರ ಬಾಯಿ' ಕವನದಲ್ಲಿ ಜನ ನಮ್ಮನ್ನು ಯಾವ ರೀತಿಯಿದ್ದರೂ ಅನ್ನುತ್ತಾರೆ ''ಗಡಗಿ ಬಾಯಿ ಮುಚ್ಚಬಹುದು ಜನರ ಬಾಯಿ ಮುಚ್ಚಕ್ಕಾಗೊಲ್ಲ'' ಎನ್ನುತ್ತಾರೆ. ಭಾರತ ದೇಶವು ಹಳ್ಳಿಗಳಿಂದ ಕೂಡಿದೆ. ಹಳ್ಳಿಗಳ ಉದ್ಧಾರವೇ ದೇಶದ ಉದ್ದಾರ ಹಳ್ಳಿಯನ್ನು ನಾವು ತಿರಸ್ಕರಿಸಬಾರದೆಂದು ಹಳ್ಳಿಯ ಮಹತ್ವವನ್ನು ಕುರಿತು ಸಾರುತ್ತಾರೆ.

### 3. ಮತ್ತೇಕೆ ಮೂಕವೇದನೆ :

ಸತ್ಯವೆನ್ನುವುದು ಸಾಪೇಕ್ಷ ಗ್ರಹಿಕೆ. ಕವಿಗೆ ಅವನ ತಿಳಿವಳಿಕೆ, ಅನುಭವ, ಮೌಲ್ಯ ಶಕ್ತಿ ಎಷ್ಟಿರುತ್ತದೋ ಅಷ್ಟರಿಂದಲೇ ಸತ್ಯದ ಒಂದು ಆಕರ ಕಾಣಿಸುತ್ತದೆ. ಅವರ ಕವನಗಳು ಅನೇಕ

18. ನೀನೊಮ್ಮೆ ಸತ್ತು ನೋಡು, ನೀನೊಮ್ಮೆ ಸತ್ತು ನೋಡು, ಪುಟ. 02

ಸಲ ಗದ್ಯದ ನಿಚ್ಚಳ, ನಿಷ್ಠುರ ಅಭಿವ್ಯಕ್ತಿಯ ಹಾದಿಯಲ್ಲೇ ಸಾಗುತ್ತವೆ. ತಾನು ಹೇಳುವುದೆಲ್ಲ ಕವನವಾಗಬೇಕೆಂಬ ಸೀಮಿತ ಆಶಯ ಇವರದಲ್ಲ. ಅದು ತನ್ನೊಳಗಿನಿಂದ ನಿರ್ಭಯವಾಗಿ, ನಿರಾಭರಣವಾಗಿ ಹೊರಬಂದು ಸಹೃದಯರನ್ನು ಪರಿಣಾಮಕಾರಿಯಾಗಿ ತಲುಪಿ ಬಿಡಬೇಕು, ಎನ್ನುವುದೇ ಅವರ ಹಂಬಲ.

ಸಿದ್ಧರಾಮ ಪೋಲೀಸ ಪಾಟೀಲರು ಕವನ ದಾಟಿಯಲ್ಲಿ ಮಾತಾಡುತ್ತಾರೆ. ದಿನ ದಿನದ ಆಗು ಹೋಗುಗಳನ್ನು ವಾಚಾಳಿಯ ಶೈಲಿಯಲ್ಲಿ ವಿಮರ್ಶಿಸುತ್ತಾರೆ. ಆಡು ಮಾತಿನ ಸುಲಭದ ಧಾಟಿ ಇವರ ಕೈಯನ್ನು ಅನುರೂಪವಾಗಿ ಹಿಡಿದಿದೆ. ಬಹುತೇಕ ಕವನಗಳು ಆಡುಮಾತಿನಲ್ಲಿ ನಾಟಕೀಯ ನಿರೂಪಣೆಯೊಂದಿಗೆ ಹೊರ ಬಂದಿದೆ.

''ಸಾಮಾಜಿಕ ರೀತಿ, ನೀತಿ ಹೇಗಿರಬೇಕೆಂಬುದು ಸಿದ್ಧರಾಮರನ್ನು ಕಾಡಿರುವ ಮುಖ್ಯ ಸಮಸ್ಯೆ. ಬಹುತೇಕ ಕವನಗಳಲ್ಲಿ ಅದರ ಚರ್ಚೆ, ಚಿತ್ರ ತೀರ್ಮಾನ ಕಂಡುಬರುತ್ತದೆ. 'ಅಂಗಡಿಕಾರ ಮತ್ತು ನಾನು' ಕವನವನ್ನೇ ಉದಾಹರಿಸುವುದಾದರೆ ; ಅಂಗಡಿಕಾರ ಮೊದಮೊದಲು ಎಲ್ಲ ಗಿರಾಕಿಗೂ ಬೇಕಾದವನಾಗಿ ಲಾಭಗಳಿಸುತ್ತಿದ್ದು, ಈಗವನಿಗೆ ವ್ಯಾಪಾರದಲ್ಲಿ ಕಾಳಜಿ ಕಡಿಮೆಯಾಗಿದೆ ; ಕಾರಣವಿಷ್ಟೆ '' ನಾ ಏನ್ಮಾಡ್ಲಿರಿ ? ಏಕ್ ನಂಬರ ಮಾಲ ತರಾದ ಕಮ್ಮಿ ! ತಂದ್ರೂ ತಗೊಳ್ಳೊರು ಕಮ್ಮಿ, ಧಾರಿಣಿ ಜಾಸ್ತಿ ಅಂತ ಬಿಡವ್ರು ಹೆಚ್ಚು.'' ಎಂದು ಅಂಗಡಿಕಾರ ಪಾಟೀಲರಿಗೆ ಹೇಳುತ್ತಾನೆ. ವ್ಯಾಪಾರಿಯ ಈ ಧೋರಣೆ, ಕವಿಯನ್ನು ತಗಿವಿಗಿಗೆ ಈಡು ಮಾಡುತ್ತದೆ. ಇದೊಂದು ಒಳ್ಳೆಯ ರೂಪಕವಾಗಿ ಕಾಣುವ ಅನುಭವ ಸ್ವಭಾವೋಕ್ತಿ ಅಲಂಕಾರ ಈ ಕವನದ ಒಡವೆ ವಸ್ತು.

ಸುಸಂಸ್ಕೃತ ಮನುಷ್ಯ ವೇದನೆಯ ಯಾತನೆಯಲ್ಲಿದ್ದಾನೆ. ಅದಕ್ಕೆ ಧ್ವನಿಯಾಗಬಲ್ಲಂಥ ಕವಿತೆಗಳು ಈಗ ಹೆಚ್ಚಾಗಿ ಬರಬೇಕಾಗಿದೆ. ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಕವನಗಳಲ್ಲಿ ಆರೋಗ್ಯಕರವಾದ ಮನಸ್ಸಿದೆ . ಸಮಾಜದ ಬಗ್ಗೆ ಕಳಕಳಿಯುಳ್ಳ ಕವನಗಳು ''ಮತ್ತೇಕೆ ಮೂಕವೇದನೆ ?'' ಸಂಕಲನದಲ್ಲಿ ಹೆಚ್ಚಿವೆ.

ಪಾಟೀಲರ ಕವನಗಳಲ್ಲಿ ರೈತರ, ಕೂಲಿಕಾರರ, ಬಡವರ ಬಗ್ಗೆ ಕಳಕಳಿ ಇದೆ. ಕನ್ನಡದ ಬಗ್ಗೆ ಅಭಿಮಾನವಿದೆ. ತತ್ವಪದಗಳ ಧ್ವನಿ ಹೇಗೋ ಈ ಭಾಗದ ಕವಿಗಳ ಕವನಗಳಲ್ಲಿ ನುಸುಳಿಕೊಂಡಿರುತ್ತದೆ. ಇದಕ್ಕೆ ಪಾಟೀಲರ ''ಮತ್ತೇಕೆ ಮೂಕವೇದನೆ.'' ಸಂಕಲನವೇ ಸಾಕ್ಷಿಯಾಗಿದೆ.

‘‘ಕವನ ಬರಿತಾನಂತ ಕವನ’’ದಲ್ಲಿ ತೋರುವ ವ್ಯಂಗ್ಯ. ‘‘ಯಾವುದು ಲಂಚ?’’ ದಲ್ಲಿ ಕಾಣಿಸುವ ಸಮಕಾಲೀನ ಸ್ಥಿತಿ. ‘ಹೆಣಕ್ಕೆ ಅಳವು’, ಕವಿತೆಯ ವಾಸ್ತವ ಸತ್ಯ ಇನ್ನೂ ಮುಂತಾದ ಹಲವನ್ನು ಎತ್ತಿ ಹೇಳಬಹುದು. ಒಟ್ಟಿನಲ್ಲಿ ಈ ಸಂಗ್ರಹ ನಮ್ಮ ಇಂದಿನ ಸಮಾಜಕ್ಕೆ ಕನ್ನಡಿ ಹಿಡಿದಿದೆ. ಈ ಕನ್ನಡಿಯಲ್ಲಿ ಮುಖ ನೋಡಿಕೊಂಡು ನಾಚುವವರು ನಾವು.

ಸಿದ್ಧರಾಮ ಪೋಲೀಸ ಪಾಟೀಲರು ವೃತ್ತಿಯಲ್ಲಿ ಇಂಜನೀಯರರಾಗಿದ್ದು, ಪ್ರವೃತ್ತಿಯಲ್ಲಿ ಸಾಮಾಜಿಕ ನೆಲೆ, ಬೆಲೆಗಳನ್ನು ಅರಿತವರು. ಸಮಾಜದಲ್ಲಿ ಸುಭಿಕ್ಷೆ, ಸಂತೃಪ್ತಿಗಳನ್ನು ನೆಲೆಗೊಳಿಸಲು ತಮ್ಮ ಕವನಗಳ ಮೂಲಕ ಧ್ವನಿ ಸೂಚಕಗಳನ್ನು ನೀಡಲು ಪ್ರಯತ್ನಿಸಿದ್ದಾರೆ. ಸುಸಂಸ್ಕೃತ ಮಾನವ ಸಂಸ್ಪರ್ಶದ ಕವಿ ಪಾಟೀಲರು. ಪರಿಸರದ ನೆಲದ ಬದುಕಿನೊಂದಿಗೆ ಕಾವ್ಯವನ್ನು ಹಾಸು ಹೊಕ್ಕಾಗಿಸುವ ಕೆಚ್ಚಿನಿಂದಾಗಿ ಕನ್ನಡ ಶಬ್ದಕೋಶದ ಶ್ರೀಮಂತಿಕೆಯನ್ನು ಹೆಚ್ಚಿಸಿದ ಕವಿ. ಭಾವಾಭಿವ್ಯಕ್ತಿಯಲ್ಲಿ ಮಹತ್ವಪೂರ್ಣವಾದ ಪಾತ್ರವನ್ನುವಹಿಸಿ, ಪಂಪನ ಕಾವ್ಯದಲ್ಲಿಯ ದೇಸೀಯತೆಯ ಸೊಬಗಿನ ಗಟ್ಟಿ ಶಬ್ದ ಸಂಪತ್ತಿನ ಬಳಕೆಯಿಂದಾಗಿ ಇಂದಿಗೂ ಕನ್ನಡದ ಕೆಚ್ಚು ಅಲ್ಲಿ ಸದಾ ಅರಳಿ ನಿಂತಂತೆ, ಈ ಕವಿಯ ‘‘ಮತ್ತೇಕೆ ಮೂಕ ವೇದನೆ’’ ಯಲ್ಲಿಯೂ ಧಾರಾಳವಾಗಿರುವ ಅಂತಹ ಆ ಶಕ್ತಿಯ ಪರಿಚಯವು ಓದುಗನಿಗೆ ಆಗುತ್ತದೆ. ಆದರೆ ಈ ಕವಿಯ ಭಾವಾತಾದಾತ್ಮದಲ್ಲಿ ಹೇಳುವ ವಿಷಯವು ಅನೇಕ ಸಲ ಬಹು ವಿಸ್ತಾರದಲ್ಲಿ ಬೆಳೆಯುತ್ತದೆ. ಇದನ್ನಷ್ಟು ಹಿತಮಿತಗೊಳಿಸಿಕೊಂಡರೆ ಕಾವ್ಯದ ಇಂಬಿಗೆ ಕೋಡು ಮೂಡಿಸಿದಂತಾಗುವುದು. ಇಂತಹ ಸೊಗಸನ್ನು ಕಾವ್ಯ ಕ್ಯಾಮರಾದಲ್ಲಿ ತುಂಬಬಲ್ಲ ಶಕ್ತಿ ಅವರಿಗೆ ಇದೆ.

ಸಿದ್ಧರಾಮ ಪೋಲೀಸ ಪಾಟೀಲರು ತೀವ್ರವಾಗಿ ಬದಲಾಗುತ್ತಿರುವ ವಿದ್ಯಮಾನಗಳನ್ನು ಅನುಮಾನ ಆತಂಕಗಳಿಂದ ನೋಡುವವರಲ್ಲದೆ, ಹಳೆಯ ವಿಧಿ ವಿಧಾನಗಳೇ ಇದ್ದುಕೊಳ್ಳಲಿ ಎಂದು ಹಾರೈಸುತ್ತಾರೆ ಇತಿ ಮಿತಿಗಳ ಚೌಕಟ್ಟಿನಲ್ಲಿ ಸೊಗಸಾದ ಬದುಕಿಗೆ ಹಾರೈಸುತ್ತಾರೆ ; ಕನಸು ಹೆಣೆಯುತ್ತಾರೆ. ಇಷ್ಟಿದ್ದೂ ಇಡೀ ಸಂಕಲನ ಓದಿ ಮುಗಿಸಿದಾಗ, ಒಂದು ಜೀವ ಏತಕ್ಕೋ ಏನನ್ನೋ ಮಿಡಿಯುತ್ತದೆ, ಇಲ್ಲಿ, ಎಂದು ಓದುಗನಿಗೆ ಅನಿಸುವುದಕ್ಕೆ ಒಂದೇ ಕಾರಣ ಕವಿಯಲ್ಲಿರುವ ಜೀವಂತಿಕೆಯ ತುಡಿತ.

ಐವತ್ತು ಕವಿತೆಗಳನ್ನೊಳಗೊಂಡ ‘ಮತ್ತೇಕೆ ಮೂಕವೇದನೆ’ ಕೃತಿಯು ಸಿದ್ಧರಾಮ ಪೋಲೀಸ ಪಾಟೀಲರ ಐದನೆಯ ಕವಿತಾ ಸಂಕಲನ. ಪ್ರಸಕ್ತ ನವ್ಯೋತ್ತರ ಸಂದರ್ಭದ ಘೋಷಣಾಪರ ಕಾವ್ಯಕ್ಕೆ

ಮನಸೋಲದೆ 'ಸ್ವಚ್ಛಂದ ಮಾರ್ಗ' ಕ್ರಮಿಸುತ್ತಿರುವ ಪೋಲೀಸ ಪಾಟೀಲರು. ಗ್ರಾಮ್ಯ ನುಡಿಗಟ್ಟುಗಳಲ್ಲಿ ಅನುಭಾವಿಯಂತೆ ಸಾರಿ ಹೇಳುವ, ಗಡಸು ಛಾತಿ ಹೊಂದಿದವರು. ಸಾತ್ವಿಕ ಚಿಂತನೆಯ ಸಮಾಜಪರ ಕವಿಯಾದ ಪೋಲೀಸ ಪಾಟೀಲರು ವೃತ್ತಿಯಲ್ಲಿ ಇಂಜನೀಯರಾಗಿದ್ದು, ಪರಿಶುದ್ಧ ಮನಸ್ಸನ್ನು ಪಾರಿವಾಳದಂತೆ ಸಾಕಿಕೊಂಡು ಬಂದವರು. ಪ್ರಸ್ತುತ ಸಂಕಲನದ 'ಕಾಲಂದು ತಗ್ದು ಕೈಯ್ಯಾಗ ಹಿಡೀರಿ' ಹಾಗೂ 'ಕವನಾ ಬರೀತಾನಂತ, ಕವನಾ' ಹಾಡುಗಳು ಹಲವು ಕವಿಗೋಷ್ಠಿಗಳಲ್ಲಿ ರಂಜಿಸಿದ ರಚನೆಗಳು. ಭರತ ವೃಕ್ಷದಂತಹ ಸುಂದರ ಸುನೀತಗಳಿಂದ ಈ ಕೃತಿಗೆ ಮಿಂಚು ಸವರಿ ಕೊಂಡಿದೆ. ಅಲ್ಲಲ್ಲಿ ಲಘುವಾದಂತೆ ಕಾಣುವ ರಚನೆಗಳಲ್ಲಿ ಥಟ್ಟನೆ ಹೊಮ್ಮುವ ತಿಳಿಹಾಸ್ಯದಿಂದ ಈ ಕವಿಯ ಕಾವ್ಯ ಅನನ್ಯವೆನಿಸುತ್ತದೆ.

ಸಮಗ್ರ ದೃಷ್ಟಿ, ನಿಷ್ಪಕ್ಷಪಾತ ವರ್ತನೆ ಜಾತ್ಯಾತೀತ ಮನೋಭಾವಗಳ ಸಂಗಮವಾದ ಸಿದ್ಧರಾಮ ಪೋಲೀಸ ಪಾಟೀಲರು ಖಚಿತ ನಿಲುವಿನ ಲೇಖಕರಾಗಿದ್ದಾರೆ. ಜೀವನದಲ್ಲಿ ಅನೇಕ ನೋವು ನಲಿವುಗಳ ಅನುಭವಗಳನ್ನು ಪಡೆದಿದ್ದಾರೆ. ಅವುಗಳನ್ನೇ ವಿಡಂಬನಾತ್ಮಕವಾಗಿ, ಲಲಿತವಾಗಿ ಕಾವ್ಯವಾಗಿ, ಚಿತ್ರಿಸಿದ್ದಾರೆ. ಜೀವನದಲ್ಲಿ ನಡೆಯುವ ಪ್ರತಿಕ್ಷಣದ ಸೂಕ್ಷ್ಮಗಳಿಗೆ ಅತ್ಯಂತ ತೀವ್ರ ಗತಿಯಲ್ಲಿ ಸ್ಪಂದಿಸುವ ಕಾಳಜಿಯಿದೆ. ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಎಲ್ಲ ಬರಹಗಳನ್ನು ಅವಲೋಕಿಸಿದರೆ, ಅವರು ಜಾನಪದ ಸೊಗಡಿನ ಜಾಡಿನಲ್ಲಿ ಬರೆಯುವುದರ ಜೊತೆಗೆ ಹಾಸ್ಯ ಮತ್ತು ವಿಡಂಬನೆಯ ಶೈಲಿಯು ತುಂಬಾ ಅದ್ಭುತವಾಗಿ ಮೂಡಿಬಂದಿದೆ.

## 02 ಸಂಪಾದನ ಸಾಹಿತ್ಯ :

ಸಂಪಾದನೆ ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಬಹಳ ಮುಖ್ಯವಾದುದು ಒಬ್ಬ ಎಷ್ಟೇ ದೊಡ್ಡ ಲೇಖಕನಾಗಿದ್ದರೂ ಆತನಿಗೆ ಒಬ್ಬ ಒಳ್ಳೆಯ ಸಂಪಾದಕನ ಅಗತ್ಯ ಇದ್ದೇ ಇರುತ್ತದೆ. ಮಲ್ಲಿಕಾರ್ಜುನನಿಂದ ಇಂದಿನವರೆಗೂ ವೈವಿಧ್ಯಮಯ ಸಂಪಾದನೆಯ ಕೆಲಸ ಕನ್ನಡದಲ್ಲಿ ನಡೆದಿದೆ.

ಕೃತಿ ರಚನೆಗಿಂತ ಗ್ರಂಥ ಸಂಪಾದನೆ ಅಧಿಕ ಶ್ರಮ, ತಾಳ್ಮೆ, ವಿದ್ವತ್ತನ್ನೂ ಬೇಡುವಂತಹದು. ಒಂದು ಕೃತಿ ರಚನೆಗೆ ಆ ಕಾಲದ ಅದಕ್ಕೆ ಸಂಬಂಧಿಸಿದ ಪರಿಜ್ಞಾನ ಇದ್ದರೆ ಸಾಕು. ಆದರೆ ಸಂಪಾದನೆ ಮಾತ್ರ ಅದಕ್ಕಿಂತ ಭಿನ್ನ ರೂಪದಲ್ಲಿದೆ. ಗ್ರಂಥ ಸಂಪಾದನೆಯ ಸಂದರ್ಭದಲ್ಲಿ ಕವಿಪಾಠ ಹಸ್ತಪ್ರತಿ ಸಾಮಗ್ರಿ, ಕವಿಪರಿಚಯ, ಕೃತಿ ರಚನೆಯ ಹಿನ್ನೆಲೆ, ಪರಿಸರ, ಕೃತಿ ಮತ್ತು ಅದರ ವಿಶ್ಲೇಷಣೆ, ಕವಿಯ ಮನೋಧರ್ಮ, ಹೀಗೆ ವಿವಿಧ ಮಗ್ಗಲುಗಳಿಂದ ಒಳಹೊಕ್ಕು ಗಮನಿಸಬೇಕಾಗುತ್ತದೆ. ಇದರೊಂದಿಗೆ ರಸ, ವ್ಯಾಸ, ಸನ್ನಿವೇಶ, ಭಾಷೆ, ಶೈಲಿ, ಛಂದಸ್ಸು, ಮೌಲ್ಯ ಮತ್ತು ಸ್ಥಾನ ನಿರ್ದೇಶನ ಮಾಡುವ, ತೂಗಿ ನೋಡುವ, ಜವಾಬ್ದಾರಿ ಸಂಪಾದಕನಿಗಿದೆ. ಈ ಕಾರಣಗಳಿಂದ ಈ ಸಂಪಾದನ ಮಹತ್ವವನ್ನು ಪಡೆಯುತ್ತದೆ.

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಇನ್ನೊಂದು ಪ್ರಮುಖ ಮತ್ತು ವೈಶಿಷ್ಟ್ಯ ಪೂರ್ಣ ಸಾಧನೆ ಅಂದರೆ ಸಂಪಾದನೆ.

1) ಬೆಣ್ಣೆತೊರೆ.

2) ಶಬ್ದ ಸೋಪಾನ - 1991.

3) ವಿನೋದ ಸಾಹಿತ್ಯ - 1995.

4) 2004 ನೇ ಸಾಲಿನ 'ಕವಿತಾ ಸಂಕಲನ'

### 1. ಬೆಣ್ಣೆ ತೊರೆ :

ಕಲಬುರ್ಗಿ ಜಿಲ್ಲಾ ಎರಡನೆಯ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ ''ಬೆಣ್ಣೆತೊರೆ''. ಭೌಗೋಲಿಕ, ಐತಿಹಾಸಿಕ ಪೂರ್ಣವಾದ ಈ ಹೆಸರು ಸೂಚಿಸಿದವರು ಪಾಟೀಲರ ಮಿತ್ರ ಶ್ರೀ ರೇವಣಸಿದ್ಧಯ್ಯ ರುದ್ರಸ್ವಾಮಿ ಮಠ. ಅವರು ಪರಿಸರದ ಹೆಸರು ಹೊತ್ತು ಹೊರಬಂದ ಈ

ಸಂಚಿಕೆಯನ್ನು ಸಹೃದಯಿಗಳ ಕೈಗಿಡಲು ಸಂತೋಷವೆನಿಸುತ್ತದೆ. ಜಿಲ್ಲಾ ಸಾಹಿತ್ಯ ಸಮ್ಮೇಳನ ಅಧ್ಯಕ್ಷರೆಂದು ಆಯ್ಕೆಗೊಂಡ ಕನ್ನಡದ ಸೇನಾನಿ ಪ್ರೊ॥ ತವಗ ಭೀಮಸೇನರಾವ.

ಸಾಹಿತ್ಯ ಸಮ್ಮೇಳನದ ಕಾರ್ಯ ಭರದಿಂದ ಪ್ರಾರಂಭವಾಗುತ್ತಲೇ ಇತ್ತು, 'ಬೆಣ್ಣೆತೊರೆ' ನೆನಪಿನ ಸಂಚಿಕೆಯ ಕಾರ್ಯವೂ ಪ್ರಾರಂಭವಾಯಿತು. ಸಂಚಿಕೆಯು ಸರ್ವಾಂಗ ಸುಂದರವಾಗಿ ಹೊರ ಬರಬೇಕೆಂದು ಸಂಪಾದಕ ಮಂಡಳಿಯು ಅಭಿಪ್ರಾಯ ಪಟ್ಟಿತು. ಜಿಲ್ಲೆಯ ಬರಹಗಾರರು ತಮ್ಮ ಲೇಖನ, ಕವನ ಕಳಿಸಿ ಉಪಕರಿಸಿದರು. ಈ ಸಮ್ಮೇಳನಕ್ಕೆ ಅನೇಕ ಗಣ್ಯ ವ್ಯಕ್ತಿಗಳು ಶುಭ ಕೋರಿದರು.

ನಾಡಿನಾದ್ಯಂತ ಜಿಲ್ಲಾ ಸಾಹಿತ್ಯ ಸಮ್ಮೇಳನಗಳು ಯಶಸ್ವಿಯಾಗಿ ನಡೆಯಬೇಕು. ತನ್ಮೂಲಕ ಅನೇಕ ಎಳೆಯ ಕುಡಿಗಳು ಹೊರ ಬರಬೇಕೆಂದು ಹಿರಿಯ ಸಾಹಿತಿಗಳಿಗೆ ಗೌರವ ಸಲ್ಲಬೇಕೆಂದು ಒಂದೇ ಸವನೆ ಚಿಂತನೆ ಮಂಥನೆ ನಡೆಸಿದ ಹಿರಿಯ ಅಣ್ಣ 'ಶ್ರೀ ಹಂಪನಾ'.

ಈ ಬೆಣ್ಣೆತೊರೆ ಸಂಪಾದನೆಯನ್ನು ಓದಿದಾಗ ಸಾಹಿತ್ಯ ಸಮ್ಮೇಳನದಲ್ಲಿ ನಡೆದ ಕಾರ್ಯಗಳ ಬಗ್ಗೆ ತಿಳಿಯುತ್ತದೆ.

**2. ಶಬ್ದ ಸೋಪಾನ :**

ಕನ್ನಡ ಸಾಹಿತ್ಯ ಸಮ್ಮೇಳನ ಮತ್ತು ಅನುಭವ ಮಂಟಪ ಹಾಗೂ ಶರಣ ಬಸವೇಶ್ವರ ಸಂಸ್ಥಾನ ಇವೆರಡಕ್ಕೂ ಅನ್ಯೋನ್ಯವಾದ ಸಂಬಂಧ ಇದೆ. ಇಲ್ಲಿಯವರೆಗೆ ಕಲ್ಬುರ್ಗಿಯಲ್ಲಿ ಮೂರು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳಾಗಿದ್ದು, ಪ್ರತಿಯೊಂದು ಸಾಹಿತ್ಯ ಸಮ್ಮೇಳನಕ್ಕೆ ಮಹಾದಾಸೋಹ ಪೀಠವು ಆಶ್ರಯ ಕೊಟ್ಟು ದಾಸೋಹಗೈದಿದೆ.

ಈ ಭಾಗದಲ್ಲಿ ಕನ್ನಡದ ಶಿಕ್ಷಣ ಇಲ್ಲದಾಗ, ಮಹಾದಾಸೋಹ ಪೀಠವು ಕ್ರಿ.ಶ. 1934 ರಷ್ಟು ಹಿಂದೆಯೇ ಹೆಣ್ಣು ಮಕ್ಕಳಿಗಾಗಿ ಪ್ರಪ್ರಥಮ ಕನ್ನಡ ಶಾಲೆಯು ಸ್ಥಾಪಿಸಿತು. ಅದೇ ರೀತಿ ಸಾಹಿತ್ಯ ಮತ್ತು ಸಂಸ್ಕೃತಿ ಬೆಳೆಸಲು ಶರಣಬಸವೇಶ್ವರ ಜಾತ್ರೆ ಉತ್ಸವ, ಶ್ರಾವಣಮಾಸ ಮತ್ತು ನಾಡಹಬ್ಬ ವೇದಿಕೆಯಾದವು. ಕರ್ನಾಟಕ ಏಕೀಕರಣಕ್ಕಾಗಿ ಮಹಾ ದಾಸೋಹ ಪೀಠವನ್ನು ಕೇಂದ್ರವಾಗಿಟ್ಟಿದ್ದರು. ಈ ಭಾಗದಲ್ಲಿ ಕನ್ನಡ ನೇತಾರರಲ್ಲಿ ಪ್ರಮುಖರಾದ ಶ್ರೀ ಎಸ್. ನಿಜಲಿಂಗಪ್ಪ ಕನ್ನಡದ ಶ್ರೇಷ್ಠ ವಿದ್ವಾಂಸರಾದ ಪಂಡಿತ ಬಿ. ಶಿವಮೂರ್ತಿ ಶಾಸ್ತ್ರಿ, ಶ್ರೀ ಆಳವಂಡಿ ಶಿವಮೂರ್ತಿ

ಸ್ವಾಮಿ ಪ್ರಸಿದ್ಧ ಕವಯಿತ್ರಿ ಶ್ರೀಮತಿ ಜಯದೇವಿ ತಾಯಿ ಲಿಗಾಡೆ, ಶ್ರೀ ವಿಶ್ವನಾಥ ರೆಡ್ಡಿ ಮುದ್ನಾಳ, ಶ್ರೀ ಸರದಾರ ಶರಣಗೌಡ, ಶ್ರೀದ.ರಾ. ಬೇಂದ್ರೆ, ಹಾಗೂ ಶ್ರೀ ಜೊಳದ ರಾಣಿ ದೊಡ್ಡಗೌಡ ಮೊದಲಾದವರನ್ನು ಆಮಂತ್ರಿಸಿ ಕನ್ನಡದ ಪ್ರಸಾರ ಮತ್ತು ಹೋರಾಟ ಮಾಡಲಾಯಿತು. ಹೀಗೆ ದಾಸೋಹ ಪೀಠವು ಶಿಕ್ಷಣ, ಸಾಹಿತ್ಯ, ಸಂಸ್ಕೃತಿ ಹಾಗೂ ಕರ್ನಾಟಕ ಏಕೀಕರಣಕ್ಕಾಗಿ ಮಹತ್ತರ ಪಾತ್ರವಹಿಸಿದೆ.

ಪಾಶ್ಚಾತ್ಯರು ತತ್ವಜ್ಞಾನ, ಸಾಹಿತ್ಯ, ಧರ್ಮ, ಸಂಸ್ಕೃತಿ ಮತ್ತು ವಿಜ್ಞಾನ ಎಲ್ಲವುಗಳನ್ನು ಕೂಡಿಸಿ ಚರ್ಚಿಸಿದ್ದೇ ಪ್ಲೇಟೋನ ಆಕಾಡೆಮಿಯಾಯಿತು. ಅಂಥ ಅಕಾಡೆಮಿ ಕನ್ನಡಕ್ಕೆ ಉಂಟೇ ? ಎಂದು ಕೇಳಿದರೆ ಉಂಟು ಎಂದು ಹೇಳಬಹುದು. ಅದುವೇ ಈ ನಾಡಿನಲ್ಲಿದ್ದ ನಾವೆಲ್ಲರೂ ಹೆಮ್ಮೆ ಪಡುವ ಅನುಭವ ಮಂಟಪದ ವಿಷಯವಾಗಿದೆ. ಮಾನವನ ಸಹಜವಾದ ಗುಣ ಧರ್ಮವೆಂದರೆ ತನ್ನ ಜೀವನದ ಆಗು ಹೋಗುಗಳ ಬಗ್ಗೆ, ತನ್ನ ಸಂಗಾತಿಗಳೊಡನೆ ಜೊತೆಗೂಡಿ ಸಹಚಿಂತನ ಮಾಡುವುದು. ತನ್ನ ಆತ್ಮದ ಬಗ್ಗೆ, ಶಿವನ ಬಗ್ಗೆ, ಅನುಭವಿಸಿ ಚಿಂತನ ಮಾಡಿದರೆ, ಅದು ಅನುಭವ ಮಂಟಪ ಆಯಿತು. ಇದೇ ರೀತಿ ಸಾಹಿತ್ಯದ ಬಗ್ಗೆ ಚಿಂತನ ಮಾಡಿದರೆ ಸಾಹಿತ್ಯ ಮಂಟಪ ಮತ್ತು ವಿಜ್ಞಾನದ ಬಗ್ಗೆ ಚಿಂತನ ಮಾಡಿದರೆ ವಿಜ್ಞಾನ ಮಂಟಪ ಆಗುತ್ತದೆ. ಈ ಒಂದು ಪರಂಪರೆ ಕಲ್ಯಾಣ ನಾಡಿನಲ್ಲಿಯೇ ಹುಟ್ಟಿತ್ತು. ಇದು ಅಭಿಮಾನದ ಸಂಗತಿ. ಆಗಿನ ಕಾಲದಲ್ಲಿ ಪ್ರಚಾರ ಮಾಧ್ಯಮ ಇಲ್ಲದಾಗ ತಾಡೋಲೆಗಳ ಮೂಲಕ ಅನುಭವ ಮಂಟಪದ ಪ್ರಸಾರ ಕಾರ್ಯ ನಡೆಯುತ್ತಿತ್ತು. ಅದೇ ರೀತಿ ಈಗ ಸಾಹಿತ್ಯ ಸಮ್ಮೇಳನ ನಡೆದಾಗ 'ಸ್ಮರಣ ಸಂಚಿಕೆಯ' ಮುಖಾಂತರ ಸಾಹಿತ್ಯದ ಬಗ್ಗೆ ಪ್ರಸಾರ ನಡೆಯುತ್ತಿರುವುದು ಸಂಪಾದನೆಯ ಪ್ರಮುಖ ಘಟ್ಟವಾಗಿದೆ.

ಈ ಸ್ಮರಣ ಸಂಚಿಕೆಗೆ ''ಶಬ್ದ ಸೋಪಾನ'' ಎಂದು ಹೆಸರು ಇಟ್ಟಿದ್ದು ತುಂಬ ಸೂಕ್ತವಾಗಿದೆ. ಈ ಶಬ್ದವನ್ನು ಆಧ್ಯಾತ್ಮಕ್ಕೆ ಸೋಪಾನವಾಗಿ ಮಾಡಿಕೊಂಡಿದ್ದರೆ, ಈಗ ಸಾಹಿತ್ಯಕ್ಕೆ ಶಬ್ದ ಸೋಪಾನವಾಗಿರುವುದು ಔಚಿತ್ಯಪೂರ್ಣವಾಗಿದೆ.

### 3. ವಿನೋದ ಸಾಹಿತ್ಯ - 1995 :

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ವಿಶೇಷ ಗುಣವೆಂದರೆ ತಾವಾಗಿ ಯಾವುದನ್ನೂ ಕೇಳಿ ಪಡೆದುಕೊಳ್ಳುವವರಲ್ಲ. ತಾನಾಗಿಯೇ ಬಂದದ್ದನ್ನು ಎಂಥ ಪರಿಸ್ಥಿತಿಯಲ್ಲೂ ಬಿಡುವವರಲ್ಲ.

ಅವರ ಈ ಸ್ವಭಾವವೇ ಸಂಪಾದನೆ ಕೆಲಸಕ್ಕೆ ಹೆಚ್ಚಿತು. 1995 ನೇ ಸಾಲಿನ 'ವಿನೋದ ಸಾಹಿತ್ಯ' ಸಂಕಲನ ಸಂಪಾದಿಸಿ ಕೊಡಲು ಕರ್ನಾಟಕ ಸಾಹಿತ್ಯ ಅಕಾಡೆಮಿ ತಿಳಿಸಿತು. ಅದಕ್ಕೆ ಪಾಟೀಲರು 'ವಿನೋದ ಸಾಹಿತ್ಯ ಸಂಕಲನವನ್ನು' ಸಂಪಾದಿಸಿದರು.

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಸಂಕಲಿಸಿದ್ದು ವಿನೋದ ಸಾಹಿತ್ಯ 'ವಿನೋದ' ವೆಂದರೆ ನಗೆ, ಕರುಣೆ ಮತ್ತು ಸರಸ, ಸಜ್ಜನಿಕೆಗಳ ಸಮ್ಮಿಲನವೇ ಆಗಿರುತ್ತದೆ. ಹೆಚ್ಚಾಗಿ ಇಂಥ ಬರಹಗಳೇ ಈ ಸಂಕಲನದಲ್ಲಿ ಸೇರಿವೆ. ಯಾವುದೇ ಟೀಕೆ, ತಿರಸ್ಕಾರಗಳಂತಹ ಶುದ್ಧ ನಗುವೇ ಎಲ್ಲಕ್ಕೂ ಶ್ರೇಷ್ಠವಾದದ್ದು.

> '' ನಗುವು ಸಹಜ ಧರ್ಮ, ನಗಿಸುವುದು ಪರಧರ್ಮ
> ನಗುವ ಕೇಳುತ ನಗುವುದ ತಿಶಯದ ಧರ್ಮ
> ನಗುವ, ನಗಿಸುವ, ನಗುತ ಬಾಳುವ ವರವ ಮಿಗೆ ನೀನು
> ಬೇಡಿಕೊಳ್ಳೋ ಮಂಕುತಿಮ್ಮಾ ''

ಎಂಬ ಡಿ.ವಿ.ಜಿ.ಯವರ ಮಾತು ಎಲ್ಲರೂ ಮನನ ಮಾಡುವಂಥದ್ದಾಗಿದೆ. ನಾವು ನಕ್ಕು, ಎಲ್ಲರನ್ನೂ ನಗಿಸಿ, ನಗುತ್ತಾ ಬಾಳುವ ಗುಣ ಎಲ್ಲರಲ್ಲಿ ಬರಬೇಕಾಗಿದೆ. ನಗುವಿನಿಂದ ದೇಹದ ಅನೇಕ ಅಂಗಾಂಗಗಳಿಗೆ ವ್ಯಾಯಾಮವಾಗುವದೆಂದೂ, ರಕ್ತ ಶುದ್ಧಿಯಾಗುವದೆಂದೂ, ದುಃಖಗಳು ದೂರಾಗಿ, ಮಾನಸಿಕ ಶಾಂತಿ ದೊರಕುವದೆಂದೂ ಹೇಳಲಾಗುವುದು. ಅದೆಷ್ಟೋ ಜನ ತಮ್ಮ ಕಷ್ಟಗಳನ್ನು ಮುಚ್ಚಿಟ್ಟು ಬೇರೆಯವರ ಸಂತೋಷಕ್ಕಾಗಿ ನಗಿಸುವವರನ್ನು ನಾವು ನೋಡಿದ್ದೇವೆ. ಇತರರನ್ನು ಸಂತಸಗೊಳಿಸುವುದೇ ಇವರ ಧ್ಯೇಯ. ಉಪನಿಷತ್ತಿನಲ್ಲಿ ಒಂದು ಮಾತಿದೆ. ಏನೆಂದರೆ, ''ಪ್ರಜ್ಞನಾದವನು ಎಲ್ಲರಿಗೂ ಸಂತೋಷವನ್ನೇ ಉಂಟು ಮಾಡಬೇಕು. ಅದೇ ಈಶ್ವರ ಪೂಜೆ.'' ಇಂಥ ಪವಿತ್ರವಾದ ಕೆಲಸವನ್ನು ನಮ್ಮ ಹಾಸ್ಯ ಸಾಹಿತಿಗಳು ಮಾಡುತ್ತಾ ಬಂದಿದ್ದಾರೆ. ಆದ್ದರಿಂದ ಹಾಸ್ಯ ಸಾಹಿತ್ಯ ಅಭಿವೃದ್ಧಿ ಹೊಂದಬೇಕು.

ಈ ಸಂಕಲನದಲ್ಲಿ ಕೇವಲ ನಾಲ್ವತ್ತು ಲೇಖಕ ಲೇಖಕಿಯರ ಲೇಖನಗಳು, ಕವನಗಳು ಉತ್ತಮವಾಗಿದ್ದರೂ ಅವೆಲ್ಲವನ್ನು ಸಂಕಲಿಸುವುದು ಇಲ್ಲಿ ಸಾಧ್ಯವಿಲ್ಲವಾಗಿದೆ. ವಿವಿಧ ಲೇಖಕರು ವಿವಿಧ ವಿಷಯಗಳನ್ನು ಕುರಿತು ಬರೆದು ಹಾಸ್ಯ ಉಕ್ಕಿಸಿದ್ದಾರೆ. ಅವುಗಳಲ್ಲಿ ಸಾಮಾಜಿಕ, ಸಾಹಿತ್ಯಿಕ, ವೈಯಕ್ತಿಕ, ವೈದ್ಯಕೀಯ, ವೈಜ್ಞಾನಿಕ, ಕೌಟುಂಬಿಕ ಮುಂತಾದ ವಿಷಯಗಳು ಒಳಗೊಂಡಿವೆ. ಹಿರಿಯ ಸಾಹಿತಿಗಳ ಜತೆಗೆ ಇದರಲ್ಲಿ ಅನೇಕ ಕಿರಿಯ ಹಾಗೂ ಹೊಸ ಬರಹಗಾರರೂ ಸೇರಿದ್ದಾರೆ. ಬಹಳಷ್ಟು

ಲೇಖಕರು ವಾರ ಪತ್ರಿಕೆ, ಮಾಸ ಪತ್ರಿಕೆ, ಹಾಗೂ ಸಾಪ್ತಾಹಿಕ ಪುರವಣಿ, ವಿಶೇಷಾಂಕಗಳಲ್ಲಿ ಬರೆಯುವವರಿದ್ದಾರೆ. ಕೆಲವರು ಯಾವಗಲಾದರೊಮ್ಮೆ ಸ್ಥಳೀಯ ಪತ್ರಿಕೆಗಳಲ್ಲಿ ಬರೆಯುವವರಿದ್ದಾರೆ. ಎಂ.ಸಿ. ಅಂಟಿನ ಅವರು '**ಶಿಕ್ಷಕ ಸಜ್ಜನ**' ಎಂಬ ಲೇಖನದಲ್ಲಿ ನಿಜವಾದ ಸಜ್ಜನ ಯಾರು ಎಂಬುದನ್ನು ನಯವಾದ ಮಾತುಗಳನ್ನೇ ಹೇಳುತ್ತಾ, ಬಂದ ಗಣ್ಯ ಅತಿಥಿಗಳ ಮೈಮೇಲಿನ ಬಟ್ಟೆಗಳೆಲ್ಲ ಬಾಡಿಗೆಯಿಂದ ತಂದದ್ದು ಎಂಬ ಗುಟ್ಟನ್ನು ರಟ್ಟು ಮಾಡಿ ನಗೆ ಉಕ್ಕಿಸಿದ್ದಾರೆ. ರವಿಂದ್ರ ಕರ್ಜಗಿಯವರು '**ಕ್ಯಾತೆ ನಾಯಿತಿ ದಾಡ್ಗೇಶರ ಫಿಲಾಸಫಿ**' ಎಂಬ ಹೆಸರಿನಲ್ಲೇ ವ್ಯಂಗ ಮೂಡಿಸಿ, ಇತ್ತಿತ್ತಲಾಗಿ ಸಾಹಿತ್ಯದಲ್ಲಿ ರಾಜಕೀಯ ಮಾಡಿ, ಕಿತಾಪತಿ ಮಾಡುತ್ತಾ ಮುಂದೆ ಬಂದ ಸಾಹಿತಿಗಳ ಅವಗುಣಗಳನ್ನು ಅಣಕ ಮಾಡಿದ್ದಾರೆ. ಶ್ರೀನಿವಾಸ ಜಾಲವಾದಿ ಅವರ '**ಕವಿ ಸಮಯ**' ಆಡುಭಾಷೆಯ ಸೊಗಡಿನಿಂದ ಕೂಡಿದ್ದು, ಕವಿ ಸಮಯದ ಸ್ಪೂರ್ತಿಯನ್ನು ವಿಡಂಬಿಸಿದ್ದಾರೆ. ಗುರುದೇವಿ ಹುಲೆಪ್ಪನವರ ಮಠ ಅವರ '**ಪುಕ್ಕಟ್ಟೆ ಸಲಹೆಗಳು**' ಎಲ್ಲರಿಗೂ ಅನೇಕ ಸಂದರ್ಭಗಳಲ್ಲಿ ಸಿಗುವ ಪುಕ್ಕಟೆ ಸಲಹೆಗಳಾಗಿವೆ. 'ಏನು ಮಾಡಿದರೂ ಜನ ಒಂದು ಮಾತನ್ನು ಅನ್ನುವವರೇ' ಎಂಬುದನ್ನು ಸಾಬೀತುಪಡಿಸಿದ್ದಾರೆ. ಗುರುರಾಜ ಕುಲಕರ್ಣಿಯವರ '**ನವೀನ ಹೆಸರು'ಗಳು** ಯಾವುದಕ್ಕೋ ಯಾರದೋ ಹೆಸರಿಡುವ ಸಂಬಂಧವಿಲ್ಲದ ಸಂದರ್ಭಗಳನ್ನು ಹೆಸರಿಸಿ ಗೇಲಿ ಮಾಡಿದ್ದಾರೆ. ಯಶವಂತ ವಾಜಂತ್ರಿಯವರು ತಮ್ಮ ಸ್ವಂತ ಅನುಭವವನ್ನು ಎಲ್ಲರೂ ಅನುಭವಿಸುವಂಥ ಸಾರ್ವತ್ರಿಕ ಸತ್ಯವನ್ನಾಗಿಸಿ '**ಪಂಪು ಕೊಂಡೀರಿ ಜೋಕೆ**' ಎಂಬ ಲೇಖನದಲ್ಲಿ ದಾಖಲಿಸಿದ್ದಾರೆ. 'ವೀರೇಶ ಗುತ್ತಲ ಅವರ, '**ಕೂಗು**' '**ಮಾರಿ ಸಂದರ್ಶನ**' ಕುತೂಹಲ ಕಾರಿಯಾಗಿದ್ದು, ಮನುಷ್ಯರ ಗುಣಾವಗುಣಗಳನ್ನು ದೆವ್ವದೊಂದಿಗೆ ಚರ್ಚಿಸಿ ವಿಡಂಬಿಸಲಾಗಿದೆ. ವಿ.ಎ. ಜೋಶಿಯವರ '**ಅಪ್ಪಸ್ವರಗಳು**' ಹಲವಾರು ಸಂದರ್ಭಗಳಲ್ಲಿ ಹಿರಿಯರು ತೆಗೆಯುವ ಅಪಸ್ವರ ಮನಸ್ಸಿಗೆ ಬೇಸರವೆನಿಸಿದರೂ, ಅದು ನಮ್ಮ ಹಿತಕ್ಕಾಗಿ ಎಂಬುದನ್ನು ರಸವತ್ತಾಗಿ ಪ್ರತಿಪಾದಿಸಿದ್ದಾರೆ. ಇವರೆಲ್ಲ ಹೊಸಬರಾಗಿದ್ದು ಹಾಸ್ಯ ಸಾಹಿತ್ಯದಲ್ಲಿ ತಮ್ಮದೇ ಆದ ಛಾಪು ಮೂಡಿಸಲು ಹೊರಟವರಾಗಿದ್ದಾರೆ.

ಇನ್ನು ಈಗಾಗಲೇ ಹೆಸರು ಮಾಡಿದಂಥ, ಪ್ರಸಿದ್ಧ ಪತ್ರಿಕೆಗಳಲ್ಲಿ ಮಿಂಚಿ ಮರೆದಂಥ ಹಿರಿಯ ಲೇಖಕ ಲೇಖಕಿಯರ ಬರಹಗಳು ಇದರಲ್ಲಿ ಸೇರಿದ್ದು, '**ಹೊಸ ಚಿಗುರು, ಹಳೆ ಬೇರು ಕೂಡಿರಲು ಮರ ಸೊಬಗು**' ಎಂಬಂತೆ ಈ ಸಂಕಲನಕ್ಕೆ ಶೋಭೆ ತಂದಿದೆ. ಮಹಿಳಾ ಸಾಹಿತಿಗಳಾದ ಟಿ.

ಸುನಂದಮ್ಮನವರ **'ಗಿರಿಜಾ ಕಲ್ಯಾಣ'** ಕಂಪ್ಯೂಟರ್ ಯುಗದಲ್ಲಿ ಕಂಪ್ಯೂಟರ ಮಿಸ್ಟೇಕ್ ದಿಂದ ಪ್ರಮಾದವಾಗಿ, ವರವನ್ನು ಫಜೀತಿಗೆ ಸಿಲುಕಿದ ಪ್ರಸಂಗ ಹಾಸ್ಯ ಚಿಮ್ಮಿಸಿದೆ. ಜೋತ್ಸ್ನಾ ಕಾಮತ್ ಅವರ **'ಸ್ಕ್ಯಾಮ್ ತಂದ ಸಂಕಟ'** ಕಲ್ಪನೆಯ ಕುದುರೆ ಏರಿದರೆ, ಟಿ. ಎಸ್. ಅಂಬುಜಾ ಅವರ **'ಪ್ರಗತಿಯ ಪ್ರಭಾವ (೪)'** ಯು ಇಂದಿನ ಮಕ್ಕಳು ಪ್ರಗತಿಯ ಹೆಸರಿನಲ್ಲಿ ಹಾದಿ ತಪ್ಪಿ ಎತ್ತ ಸಾಗುತ್ತಿದ್ದಾರೆಂಬುದನ್ನು ವಿವರಿಸಿದ್ದಾರೆ. ಭುವನೇಶ್ವರಿ ಹೆಗಡೆಯವರ **'ಕೂಸಿರುವ ಮನೆಯಲ್ಲಿ'** ಚಿಕ್ಕ ಮಕ್ಕಳ ತುಂಟಾಟಿಕೆ , ಕಿಡಿಗೇಡಿತನದ ವರ್ಣನೆ ಚಿತ್ತಾಕರ್ಷಕವಾಗಿದೆ. ಜಯಶ್ರೀ ದೇಶಪಾಂಡೆಯವರ **'ಪ್ರೇಮ ಮತ್ತು ಯುದ್ಧದಲ್ಲಿ'** ಲಂಚ ತಿನ್ನದ ಅಧಿಕಾರಿಗಳು ಕೈಯಿಂದ ಕೆಲಸ ಮಾಡಿಸಿಕೊಳ್ಳುವ ಚಾಣಾಕ್ಷ ತಂತ್ರ ಓದುಗರನ್ನು ಒಳಗೊಳಗೇ ನಗುವಂತೆ ಮಾಡುತ್ತದೆ. ಹೀಗೆ ಹೆಣ್ಣು ಮಕ್ಕಳು ಕೂಡ ಹಾಸ್ಯ ಸಾಹಿತ್ಯವನ್ನು ವೃದ್ಧಿಸುವಲ್ಲಿ ಹೆಚ್ಚಿನ ಆಸಕ್ತಿವಹಿಸಿದ್ದನ್ನು ಕಾಣಬಹುದಾಗಿದೆ.

ದಿನನಿತ್ಯದಲ್ಲಿ ಕಂಡುಂಡ ಅನುಭವಗಳನ್ನು ಹಿರಿಯರಾದ ವೀರೇಂದ್ರ ಸಿಂಪಿಯವರು **'ಹೊಸ ರುಚಿಯ ಅನುಭವ'**ದಲ್ಲ ಉತ್ತರ ಕರ್ನಾಟಕದ ಹಲವು ವಿವಿಧ ಊಟ ತಿಂಡಿಗಳ ಬಗ್ಗೆ ಬರೆದು, ಓದುಗರು ಬಾಯಿ ಚಪ್ಪರಿಸುವಂತೆ ಮಾಡಿದ್ದಾರೆ. ಮಲ್ಲಿಕಾರ್ಜುನ ಹುಲಗಬಾಳಿಯವರು **'ಹೆಂಡತಿಯನ್ನು ಕರೆಯುವ ಪರಿ'** ನಿಜವಾಗಿಯೂ ಚಿಂತನೆಗೀಡು ಮಾಡುವಂತಿದೆ. ಪಿ. ಎಸ್. ರಾಮಾನುಜಂ ಅವರ **'ಸಮಯಕ್ಕೆ ಸರಿಯಾಗಿ ಹೋಗಬೇಡಿ'** ನಮ್ಮ ಸಮಾಜದ ಇಂದಿನ ನೈಜ ವಿಡಂಬನೆಯಾಗಿದೆ. ಅನಂತ ಕಲ್ಲೋಳ ಅವರ **'ಇಳ್ಯಾಕ ಹತ್ಯಾರು'** ಬೇರೆ ಬೇರೆ ಭಾಗದ ಭಾಷಾ ಪದ ಪ್ರಯೋಗದಲ್ಲಿ ಕಂಡುಬರುವ ವೈವಿಧ್ಯತೆಯನ್ನು ಹಾಸ್ಯ ವನ್ನಾಗಿಸಿದ್ದಾರೆ. ಪ. ರಾಮಕೃಷ್ಣ ಶಾಸ್ತ್ರಿಗಳ **'ನನ್ನಾಕೆಯ ಭಾಷಾ ಕಾರ್ಯಕ್ರಮ ಓದುತ್ತಾ ಹೋಗಿ ಕೊನೆಗೆ** 'ನೀವು ಬರೆದುಕೊಟ್ಟ ಅಕ್ಷರ ಸರಿಯಾಗಿ ಕಾಣ್ತಿರಲಿಲ್ಲ' ಎಂಬ ವಾಕ್ಯದಿಂದ ನಗುವನ್ನು ಹರಿಸಿದ್ದಾರೆ. ರಮಾನಾಥ ಅವರ **'ಬೋಳು ನಿರ್ಣಯ'**ಗಳು ಬೋಳು ತಲೆಯವರ ಸಂಘಕ್ಕೆ ಉಪಯಕ್ತವಾಗಿದೆ. ಎಂ. ಎಸ್. ನರಸಿಂಹಮೂರ್ತಿಗಳ **'ವೈಕುಂಠಕ್ಕೆ ಬುಲಾವ್'** ಭೂಮಂಡಲದಲ್ಲಿ ನಡೆಯುವ ಕಲಬೆರಕೆ,**'ಕನ್ನಡದಲ್ಲಿ ಸಂಪೂರ್ಣ ವ್ಯವಹಾರ'** ಎಂಬ ಗೊಳ್ಳು ಆರ್ಡರಗಳನ್ನು ಕುರಿತು ಅತ್ಯಂತ ಮೊನಚು ಮಾತಿನಲ್ಲಿ ಅಣಕಿಸಲಾಗಿದೆ. ಎಚ್. ಆನಂದರಾಮ ಶಾಸ್ತ್ರಿಗಳ **'ಕೌರವ ಎಂಬ**

**ರೌರವ'** ದಲ್ಲಿ ಅಲ್ಪಪ್ರಾಣ, ಮಹಾಪ್ರಾಣಗಳ ವ್ಯತ್ಯಾಸದಿಂದ ಶಬ್ದಗಳಲ್ಲಿ ಎಂತೆಂಥ ಅನಾಹುತ ಸಂಘಟಿಸುತ್ತದೆಂಬುದನ್ನು ರಸಭರಿತವಾಗಿ ತಿಳಿಸಿದ್ದಾರೆ. ಎಂ.ಪಿ. ಮನೋಹರ ಚಂದ್ರನ್ ಅವರು ಈಗಿನ ಕಾಲಕ್ಕೆ ಅವಾರ್ಡ ಬೇಕಾದರೆ ಏನೇನು ಮಾಡಬೇಕು ? ಎಷ್ಟು ಖರ್ಚು ಭರಿಸಬೇಕು ? ಎಂಬುದನ್ನು ನಗಿಸುತ್ತಲೇ ಸತ್ಯ ಸಂಗತಿಯನ್ನು ಬಿಚ್ಚಿಟ್ಟಿದ್ದಾರೆ. ಪ್ರಭಾ ಅವರ 'ಅದನ್ನ ಬಿಟ್ಟು ಚಟಗಳ ದಾಸನಾಗಿದ್ದವನು ಹೇಗೆ ಒಂದು ಚಟದಿಂದ ಇನ್ನೊಂದು ಚಟಕ್ಕೆ ಜಿಗಿಯುತ್ತಾನೆಂಬುದನ್ನು ಸುಂದರವಾಗಿ ಬಿಡಿಸಿಟ್ಟಿದ್ದಾರೆ.

ಎಚ್.ಕೆ. ರಂಗನಾಥರ ಕೃಷ್ಣಾಜಿನವನು ಹೊರ ದೇಶಕ್ಕೆ ಒಯ್ಯುವಾಗ ಹೇಳುವ ಸುಳ್ಳು ಕಸ್ಟಂ ಅಧಿಕಾರಿಯಿಂದ ಪಾರು ಮಾಡಿದರೆ, ಪ್ರಾಣೇಶ ಗುಡಿಯವರ ಎನಿತು ಸೊಗಸು ಈ ಸುಳ್ಳಿನ ಪರಿಯು ಸುಳ್ಳಿನಿಂದ ಸಿಗುವ ಸುಖ, ಸೌಲಭ್ಯವನ್ನು ನಗಿಸುತ್ತಲೇ ಸುಳ್ಳಿನ ಮಹಿಮೆಯನ್ನು ಸಾರಿದ್ದಾರೆ. ತುರುವೇಕೆರೆ ಪ್ರಸಾದ ಅವರು **'ಪರ್ಮೇಶಿಯ ಪಾಲಿಕ್ಲಿನಿಕ'** ದಲ್ಲಿ ದೈವ ಒಲಿದರೆ ಕೊರಡು ಕೊನರುವದನ್ನು ತೋರಿಸಿಕೊಟ್ಟಿದ್ದಾರೆ. ಹಣ ಕೊಟ್ಟರೆ 'ವಾಸಿ' ಮಾಡುವ ಡಾಕ್ಟರರು, ಇಲ್ಲವಾದರೆ 'ಶಿವಾ' ಎನ್ನಿಸುವರೆಂಬಲ್ಲಿ ಹಾಸ್ಯ ತುಂಬಿ ನಿಂತಿದೆ. ಕೆ. ಆರ್. ನಾಗಭೂಷಣ ಅವರ **ಆಯುರ್ವೇದ ವರ್ಸ್‌ಸ್ 'ಇಂಗ್ಲೀಷ'** ದಲ್ಲಿ ರಜಾ ಮಂಜೂರಿಗೆ ಇಂಗ್ಲೀಷ ಡಾಕ್ಟರರ ಸರ್ಟಿಫಿಕೇಟ ಬೇಕೆನ್ನುವ ರೂಲ್ಸು ಇದ್ದು, ಸ್ವತಃ ಇಂಗ್ಲೀಷ್ ಡಾಕ್ಟರರೇ ಆಯುರ್ವೇದಿಕ್ ಡಾಕ್ಟರರ ಹತ್ತಿರ ವೈದ್ಯೋಪಚಾರಕ್ಕೆ ಹೋಗುವ ವಿಚಾರ ವ್ಯಂಗ್ಯದಿಂದೊಡಗೂಡಿದ್ದು, ವಿಚಾರ ಮಾಡುವಂಥದ್ದಾಗಿದೆ. ಎಸ್.ಪಿ. ಶಾನಭಾಗರವರು ಹುಟ್ಟಿನಿಂದ ಸಾಯುವವರೆಗೆ ಬರೀ ಸರ್ಟಿಫಿಕೇಟ್ ಮೇಲೆಯೇ ಜೀವನ ನಿಂತಿದೆ ಎಂಬುದನ್ನು ಸಂದರ್ಭದೊಡನೆ ಸ್ಪಷ್ಟೀಕರಿಸಿದ್ದಾರೆ. ಸೂರಿ ಹಾರ್ದಳ್ಳಿಯವರ **ಪ್ರೇಮಿಗಳೂ ದಂಪತಿಯರು,** ಪ್ರೇಮಿಗಳಿಗೂ, ದಂಪತಿಯರಿಗೂ ಇರುವ ವ್ಯತ್ಯಾಸವನ್ನು ಮಾರ್ಮಿಕವಾಗಿ ವಿವರಿಸಿದ್ದಾರೆ. ವೈ. ಎನ್. ಗುಂಡೂರಾವ್ ಅವರು **ಬಾಡಿಗೆಯವರು,** ಜತೆಗೆ ಮನೆಯ ಮಾಲಿಕರ ಸಂಬಂಧ ಸ್ವಲ್ಪ ಏರುಪೇರಾದರೂ 'ನೆರೆ' 'ಹೊರೆ' ಯಾಗುವುದೆಂಬುದನ್ನು ಮನಮುಟ್ಟುವಂತೆ ವರ್ಣಿಸಿದ್ದಾರೆ. ಎನ್.ಕೆ. ಕುಲಕರ್ಣಿಯವರು ಆಕಾಶವಾಣಿಯಲ್ಲೇ ಕೆಲಸ ಮಾಡಿ ನಿವೃತ್ತಿ ಹೊಂದಿದವರಾಗಿದ್ದು ತಮ್ಮ ಅನುಭವವನ್ನು **'ಆಕಾಶವಾಣಿ ಅನೌನ್ಸರ್'** ದಲ್ಲಿ ಹಾಸ್ಯ ಪೂರ್ಣವಾಗಿ ವಿಶ್ಲೇಷಿಸಿದ್ದಾರೆ. ಅ.ರಾ.ಸೇ. ಅವರು **'ತಾತ ಹೇಳಿದ್ದು'**, ಮತ್ತು ಕೇಫ ಅವರ

**'ರೇಸಿಂಗ್ ಗೈಡ್'** ನಂಬಿಕೆಗಳನ್ನು ಆಧರಿಸಿ ಬರೆಯಲಾಗಿದೆ. ಡಾ. ಪ್ರಭುಶಂಕರ ಅವರ **'ನಾಯಿ ತಂದ ಪೇಚು'** ಮತ್ತು ದು.ನಿಂ. ಬೆಳಗಲಿ ಅವರ **'ಗಂಡ ಹೆಂಡತಿ ಮತ್ತು ಲಗೇಜ್'** ವೈಯುಕ್ತಿಕ ಅನುಭವಗಳನ್ನು ಹಾಸ್ಯ ಬರಿತವಾಗಿ ಮೂಡಿಸಿದ್ದಾರೆ. ಎಂ.ಡಿ. ಗೋಗೇರಿ ಅವರ **'ಆತ್ಮಹತ್ಯೆ ಮಹಾಪುಣ್ಯಂ'** ಬಹು ತಮಾಷೆಯಾಗಿ ಮೂಡಿ ಬಂದಿದ್ದು, ಸುಲಭ ಮತ್ತು ತ್ರಾನೆಲ್ಲದ ಸಾವೆಂದರೆ ಸಾಕಷ್ಟು ಕುಡಿದು ಸಾಯುವುದು ಎಂಬಲ್ಲಿ ಹಾಸ್ಯ ಉಕ್ಕಿದೆ. ಕೃಷ್ಣ ಮೂರ್ತಿ ಕಿತ್ತೂರರ **'ಚಹ ಕುಡಿಯುವದು'** ಅತ್ಯಂತ ವಿನೋದ ಭರಿತ ಲೇಖನವಾಗಿದ್ದು, ಹೊಸ ಫ್ಯಾಶನ ಮಾಡುವವರಿಗೆ ದಾರಿ ದೀಪವಾಗಿದೆ. ಪಿ.ಬಿ. ಪ್ರಸನ್ನ ಅವರ **'ಉತ್ತರ ಕ್ರಿಯೆ'** ವಿದ್ಯಾರ್ಥಿಗಳಿಗೆ ಮಾರ್ಗದರ್ಶಿಯಾಗಿದೆ. ಅ.ರಾ. ಮಿತ್ರರವರ **'ಕಮ್ಮಟದಲ್ಲಿ ತುತ್ತೂರಿ'** ಒಂದೇ ವಿಷಯವನ್ನು ಹಲವು ವಿಮರ್ಶಕರು ತಮ್ಮ ಮೂಗಿನ ನೇರಕ್ಕೇ ಎಳೆದು ವಿಮರ್ಶಿಸುವ ಪರಿಯನ್ನು ಲೇವಡಿ ಮಾಡಿ ತೋರಿಸಿದ್ದಾರೆ ಕೊನೆಯದಾಗಿ ಶ್ರೀಸಿದ್ಧರಾಮ ಪೋಲೀಸ ಪಾಟೀಲರ ಲೇಖನ **'ಉರಿ ಉರಿ - ಧಗಿ ಧಗಿ'** ಗುಲಬರ್ಗಾ ವಿಭಾಗದವರು ಬೇಸಿಗೆಯಲ್ಲಿ ಪಡುವ ಬವಣೆಯನ್ನು ಫ್ರಿಡ್ಜಿನ ಸುತ್ತಾ ಹೆಣೆದು ಆಡು ಭಾಷೆಯಲ್ಲಿ ವಿಡಂಬಿಸಿದ್ದಾರೆ.

ನಗೆ ಬದುಕಿನ ಪ್ರಮುಖ ಅಂಗ ಇಂಥ ಹಾಸ್ಯ ಪ್ರಜ್ಞೆ ಪ್ರತಿಯೊಬ್ಬರಲ್ಲಿ ಇನ್ನೂ ಹೆಚ್ಚಾಗಿ ಬೆಳೆಯಲಿ, ಕೃತಿಮತೆ ಅಳಿಯಲಿ ಸಂತೋಷ ಚಿಮ್ಮಲಿ ಎನ್ನುವುದೇ ಶ್ರೀ ಸಿದ್ಧರಾಮ ಪೋಲೀಸ್ ಪಾಟೀಲರ ಆಶಯ.

**4. 2004 ನೇ ಸಾಲಿನ ಕವಿತಾ ಸಂಕಲನ :**

ಪತ್ರಿಕೆಗಳಲ್ಲಿ ಪ್ರಕಟಗೊಂಡ ಕವಿತೆಗಳನ್ನು ಮಾತ್ರ ಆಯ್ದುಕೊಳ್ಳಬೇಕೆಂಬ ಅಕ್ಕಾಡೆಮಿಯ ನಿಯಮವಿರುವದರಿಂದ, ಹೈದ್ರಾಬಾದ ಕರ್ನಾಟಕ ಭಾಗದ ಅನೇಕ ಹಿರಿ ಕಿರಿ ಕವಿಗಳ ಕವನಗಳು ಇದರಲ್ಲಿ ಸೇರ್ಪಡೆಗೊಳಿಸಲು ಸಾಧ್ಯವಾಗಲಿಲ್ಲ. ಏಕೆಂದರೆ ಈ ಭಾಗದ ಕವಿಗಳು ಹೆಚ್ಚಾಗಿ ಪತ್ರಿಕೆಗಳಿಗೆ ಕವನಗಳನ್ನು ಕಳಿಸುವುದೇ ಕಡಿಮೆ ಕಳಿಸಿದರೂ ಪ್ರಮುಖ ಪತ್ರಿಕೆಗಳವರು ಅವುಗಳನ್ನು ಪ್ರಕಟಿಸದಿರುವದೊಂದು ಪ್ರಮುಖವಾದ ವಿಷಯವಾಗಿದೆ. ಸಾಕಷ್ಟು ಪ್ರತಿಭಾನ್ವಿತ ಕವಿಗಳು ಈ ಭಾಗದವರಿದ್ದರೂ, ಪತ್ರಿಕೆಗೆ ಕವನಗಳನ್ನು ಕಳಿಸುವ ಹವ್ಯಾಸ ಕಡಿಮೆ ಕಳಿಸಿದರೂ ಪ್ರಭಾವ ಬೇಕೆಂಬ ನಂಬಿಕೆ ಇರುವದರಿಂದ ಅದು ನಿಜವೂ ಅಗಿರುವದರಿಂದ ಪತ್ರಿಕೆಗಳಲ್ಲಿ ಪ್ರಕಟಿತ ಕವನ

ಹುಡುಕುವುದು, ಪಾಟೀಲರಿಗೆ ಮರುಭೂಮಿಯಲ್ಲಿ ನೀರು ಹುಡುಕಿದಂತಾಗಿದೆ. ಬೇಕಾದರೆ ಸ್ವಂತ ಖರ್ಚಿನಲ್ಲಿ ಒಂದು ಕವನ ಸಂಕಲನ ಪ್ರಕಟಿಸುತ್ತಾರೆಯೇ ಹೊರತು, ಪತ್ರಿಕೆಗೆ ಕಳಿಸುವುದಿಲ್ಲ. ಹೀಗಾಗಿ ಈ ಭಾಗದಲ್ಲಿ ಕವಿಗಳು ಸಾಕಷ್ಟಿದ್ದರೂ ಪಾಟೀಲರಿಗೆ ಸಿಕ್ಕ ಕವಿತೆಗಳು ಬಹಳ ಕಡಿಮೆ ಉದಯೋನ್ಮುಖರ ಕವಿತೆಗಳು ಪತ್ರಿಕೆಯಲ್ಲಿ ಸಿಕ್ಕುವುದೇ ಕಡಿಮೆ. ಹೀಗಾಗಿ ದೊರೆತುದನ್ನು ಆರಿಸಿಕೊಳ್ಳಲಾಗಿದೆ.

ಪಾಟೀಲರು ಆಯ್ದುಕೊಂಡ ಕವಿಗಳಲ್ಲಿ ಸುಮಾರು 16 ಜನ ಕವಯತ್ರಿಯರು ಮತ್ತು 73 ಜನ ಕವಿಗಳಿದ್ದಾರೆ. ಇದರಲ್ಲಿ ಖ್ಯಾತನಾಮರಾದ ಶ್ರೀ ಚೆನ್ನವೀರ ಕಣ್ವಿ, ಡಾ. ಜಿ.ಸ್. ಶಿವರುದ್ರಪ್ಪ, ಡಾ. ಎನ್. ಎಸ್. ಲಕ್ಷ್ಮಿನಾರಾಯಣ ಭಟ್ಟ, ಪ್ರೋ. ಕೆ. ಎಸ್. ನಿಸ್ಸಾರ ಅಹಮದ್ ಮುಂತ್ಹಾದ ಹಲವರು ಹಿರಿಯರಿದ್ದಾರೆ. ಹೊಸಬರು ಹಾಗೂ ಉದಯೋನ್ಮುಖರಲ್ಲಿ ಡಾ. ಮುರಲಿಧರ ದೇಶಪಾಂಡೆ, ಡಾ. ಗವಿಸಿದ್ದಪ್ಪ ಪಾಟೀಲ, ಮಲ್ಲೇಶಪ್ಪಾ ಟೇಲರ, ಡಾ. ವಿಕ್ರಮ ವಿಸಾಜಿ ಹೀಗೆ ಹಲವರು ಇದ್ದಾರೆ.

ಇಲ್ಲಿ ಆಯ್ದುಕೊಂಡ ಕವಿತೆಗಳು ಸಮಗ್ರ ಕರ್ನಾಟಕವನ್ನು ಒಳಗೊಂಡಿದೆ. ಅಂದರೆ ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕದಿಂದ ಬಂದಂಥವುಗಳಾಗಿವೆ. ಅಲ್ಲದೆ ಆಂಧ್ರ ಮತ್ತು ಮಹಾರಾಷ್ಟ್ರದಲ್ಲಿರುವ ಕನ್ನಡ ಕವಿಗಳಿಂದ ಪ್ರಕಟಗೊಂಡ ಕವನಗಳು ಸೇರಿವೆ. ಗಡಿಭಾಗದಿಂದಲೂ ಕವನಗಳು ಬಂದಿವೆ. ಪ್ರಾದೇಶಿಕ ಭೇಧಭಾವವಿಲ್ಲದೆ ಉತ್ತಮವೆನಿಸಿದ ಕವನಗಳನ್ನು ಆರಿಸಿಕೊಳ್ಳಲಾಗಿದೆ.

ಇದರಲ್ಲಿ ಹಲವು ಕವಿತೆಗಳು ಹಾಡಲಿಕ್ಕೆ ಬರುವಂಥವುಗಳಾಗಿವೆ. ''ಸಿರಿಮಾವು ಬಿರಿದಿಲ್ಲ'', ''ಮೊಬೈಲ್ ಹುಚ್ಚು'', ''ಚೆಲುವ ಚೆಲ್ಲುವ ಚೆಲುವಾ ನಾಡಿದು'' ಮುಂತಾದ ಹತ್ತಾರು ಕವನಗಳನ್ನು ಸುಶ್ರಾವ್ಯವಾಗಿ ಹಾಡಬಹುದಾಗಿದೆ. ಇತ್ತೀಚಿನ ದಿನಗಳಲ್ಲಿ ಚುಟುಕುಗಳಿಗೆ ಭಾರಿ ಬೆಲೆ ಬಂದಿದೆ ಏಕೆಂದರೆ ಗಡಿಬಡಿಯ ಈ ಕಾಲದಲ್ಲಿ ಯಾರಿಗೂ ದೀರ್ಘ ಕವನ, ಕಾದಂಬರಿ ಓದುವ ಪುರುಸೊತ್ತು ಇಲ್ಲ. ಹೀಗಾಗಿ " Short but sweet' ಎಂಬ ಮಾತಿನಂತೆ ಚಿಕ್ಕದಾಗಿರಬೇಕು. ಮನಸ್ಸಿಗೆ ಮುದ ನಿಡುವಂತಿರಬೇಕು ಎಂದು ಬಹಳಷ್ಟು ಜನರು ಬಯಸುವರು. ಹೀಗಾಗಿ ಹೆಚ್ಚಿನ ಕವಿಗಳು ಚುಟುಕಿನ ಬೆನ್ನು ಹತ್ತಿದ್ದಾರೆ. ಆ ಕಾರಣಕ್ಕಾಗಿ ಇಲ್ಲಿ ಜರಗನಹಳ್ಳಿ ಶಿವಶಂಕರ, ಸಿ.ಪಿ.ಕೆ., ಡಾ. ಶೈಲಜಾ ಉಡಚಾಣ ಮುಂತಾದವರರೂ ಚುಟುಕುಗಳನ್ನು ಸೇರಿಸಿಕೊಳ್ಳಲಾಗಿದೆ.

2004 ಘಟಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಇಲ್ಲಿ ಕವಿಗಳು ಸ್ಪಂದಿಸಿದ್ದನ್ನು ಕಾಣಬಹುದಾಗಿದೆ. ಅವುಗಳೆಂದರೆ 2004 ರಲ್ಲಿ ಬಂದ ರಸ ಋಷಿ ಕುವೆಂಪುರವರ ಶತಮಾನೋತ್ಸವ ಕುವೆಂಪುರವರನ್ನು ಕುರಿತು ಡಾ. ವಸಂತಕುಮಾರ ಪೆರ್ಲರವರು 'ಕಾವ್ಯ ಮಹಾಂತ' ಎಂಬ ಕವನವನ್ನು ರಚಿಸಿದ್ದಾರೆ.

'' ಯಾರಲ್ಲಿ ಕುಳಿತವರು ಆರಾಮ ಕುರ್ಚಿಯ ಮೇಲೆ
ನೀಳ ಮೈ ಚಾಚಿ, ಘನ ಗಂಬೀರ ಚಿಂತನಾ ಸಮುದ್ರ ಮುದ್ರಿಯಲಿ
ಚುರುಕು ಕಂಗಳ, ಶ್ವೇತ ರಂಗಿತದುಕೂಲದ ಪುರುಷ....''

ಹೀಗೆ ಕವಿಯ ವ್ಯಕ್ತಿ ಚಿತ್ರಣ ಹಾಗೂ ಅವರ ಕಾವ್ಯವನ್ನು ಕುರಿತು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ.

ಇನ್ನೊಂದು ಘಟನೆಯೆಂದರೆ, ಮಲ್ಲಿಗೆ ಖ್ಯಾತಿಯ ಕವಿ ಡಾ. ಕೆ. ಎಸ್. ನರಸಿಂಹ ಸ್ವಾಮಿಯವರು ನಮ್ಮನ್ನು ಅಗಲಿಹೋದದ್ದು, ಅವರನ್ನು ಕುರಿತು ಡಾ. ಎನ್. ಎಸ್. ಲಕ್ಷ್ಮಿನಾರಾಯಾಣ ಭಟ್ಟರು ಕೆ. ಎಸ್. ನರಸಿಂಹಸ್ವಾಮಿ ಎಂಬ ಕವನದಲ್ಲಿ

'' ನಿಮ್ಮಂತೆ ಅರಳಿ ಸುತ್ತೆಲ್ಲ ಪರಿಮಳ ಚೆಲ್ಲಿ ಯಾರು ಬಾಳಿದರು ?
ಜನದ ಎದೆ ಎದೆಯಲ್ಲೂ ಸಿಂಹಾಸನವೇರಿ ಯಾರು ಆಳಿದರು ?

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಮೊಬೈಲ ಹುಚ್ಚು ಎಂಬ ಕವನದಲ್ಲಿ

''ರಿಕ್ಷಾ, ಟಾಂಗಾ ಕೂಲಿ ಮಾಡವ್ರಿಗೂ ಗುಂಗ ಹಿಡಿಸಿತ್ತು.
ಸಾಲ ಮಾಡ್ಯಾದ್ರೂ ಮೊಬೈಲ್ ಕೊಳ್ಳುವ ದಂಧೆ ಸುರುವಾಯ್ತು,
ಎಂಥ ಜಾದೂ! ಎಂಥ ಮೋಡಿ ! ಹುಚ್ಚ ಮಾಡ್ಯಾದ ಜನಕ
ಎಚ್ಚರದಿಂದ ಬಳಸದಿದ್ರೆ, ಕೆಡವತಾದ ನೆಲಕ''

ಎಂದು ಹೃದಯ ಸ್ಪರ್ಶಿಯಾಗುವಂತೆ ಅವರ ಗುಣಗಾನ ಮಾಡಿದ್ದಾರೆ. ಅವರಿಗೆ ಅಶ್ರುತರ್ಪಣ ಸಲ್ಲಿಸಿದ್ದಾರೆ ಎಂದು ಮೊಬೈಲ ಮಹಿಮೆಯನ್ನು ವಿವರಿಸುತ್ತಾ ಅದರಿಂದಾಗುವ ಲಾಭ- ಹಾನಿಗಳ ವಿವರಣೆಯನ್ನು ಗ್ರಾಮ್ಯ ಭಾಷೆಯಲ್ಲಿ ಸುಂದರವಾಗಿ ಕಟ್ಟಿಕೊಟ್ಟಿರುವರು.

ಕೆಲವೇ ಕೆಲವರಲ್ಲಿದ್ದ ಮೊಬೈಲ್, ದರ ಕಡಿಮೆಯಾದಾಗ ಎಲ್ಲರ ಹತ್ತಿರ ಮೊಬೈಲ ಸಾಮಾನ್ಯವಾಯಿತು. ಕೂಲಿ ಮಾಡುವವನ ಮತ್ತು ರಿಕ್ಷಾ ನಡೆಸುವವನ ಕೈಯಲ್ಲಿ ಮೊಬೈಲ್ ಇದೆ.

ಇನ್ನು ಇಲ್ಲಿಯ ಕವಿಗಳಿಗೆ ಕಾಡಿದ ವಿಷಯಗಳು ಹಲವಾರು, ರಾಜಕೀಯ, ರಾಜಕಾರಣಿಗಳು, ಸಿರಿವಂತರ ಶೋಷಣೆ, ಆಧ್ಯಾತ್ಮ, ಮುಪ್ಪು, ಸಾವು, ಗಾಂಧಿ, ದೇಶ , ಬದುಕು, ಹೊಸ ವರ್ಷ ಹೀಗೆ ಹತ್ತು ಹಲವಾರು ವಿಷಯಗಳು ಕವಿಗಳಿಗೆ ವಿಷಯ ಒದಗಿಸಿ ಕೊಟ್ಟಿವೆ. ಕವಿಗಳು ತಮ್ಮದೇ ಆದ

ಶೈಲಿಯಲ್ಲಿ ಹಾಗೂ ಕಲ್ಪನೆಯಲ್ಲಿ ಕವನವನ್ನು ಹೊಸೆದಿದ್ದಾರೆ. ಕೆಲವೊಂದು ಮಾತ್ರ ಇಲ್ಲಿ ಉಲ್ಲೇಖಿಸಲಾಗಿದೆ. ಸಿಕ್ಕಷ್ಟೇ ಮುತ್ತು ಹವಳಗಳನ್ನು ಸೇರಿಸಿ ಒಂದು ಸರವಾಗಿ ಪೋಣಿಸಿದ್ದಾರೆ. ಸಂಪಾದನೆಯಿಂದ ಈ ಎಲ್ಲಾ ಅಂಶಗಳು ಕಾಣುತ್ತವೆ.

### 3. ಪ್ರಬಂಧ ಸಂಕಲನಗಳು :

ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಯಿಂದಲೇ ಈ 'ಗದ್ಯ' ಸಾಹಿತ್ಯ ರೂಪದ ವಿಕಾಸ ನಮ್ಮ ಆಧುನಿಕ ಸಾಹಿತ್ಯದಲ್ಲಾಗಿದೆ. ಇಂಗ್ಲೀಷ ಸಾಹಿತ್ಯದಲ್ಲಿ ಬೆಳೆದು ಬಂದ 'ಎಸ್ಸೆ' ಎಂಬುದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಪ್ರಬಂಧ' ಮತ್ತು 'ನಿಬಂಧ' ಎಂದು ಎರಡು ಪದಗಳು ಬಳಕೆಯಲ್ಲಿವೆ. ಇವುಗಳ ಶಾಬ್ದಿಕ ಅರ್ಥ ಒಂದೆ ಆಗಿದ್ದರೂ ಬಳಕೆಯಲ್ಲಿ ಅವು ವಿಶೇಷ ಅರ್ಥವನ್ನು ಪಡೆದಿವೆ. 'ನಿಬಂಧ 'ವೆಂಬುದು 'ಸ್ಕೂಲ್ ಎಸ್ಸೆ' ಪರಿಮಿತ ಅರ್ಥದಲ್ಲಿ ಪ್ರಚಾರದಲ್ಲಿದ್ದರೆ, 'ಪ್ರಬಂಧ' ವೆಂಬುದು ಅದಕ್ಕಿಂತಲೂ' ವ್ಯಾಪಕವಾದ ಅರ್ಥದಲ್ಲಿ ಪ್ರಯೋಗಗೊಳ್ಳುತ್ತಿದ್ದು, 'ಎಸ್ಸೆ ' ಎಂಬ ಮೂಲ ಪದವನ್ನು ಪ್ರತಿನಿಧಿಸುತ್ತಿದೆ. ಇದೇ ಸಾಹಿತ್ಯಿಕ ಪ್ರಬಂಧವೂ ಲಲಿತ ಪ್ರಬಂಧವೂ ಆಗಿದೆ.

ಪ್ರಬಂಧವೆಂಬ ಸಾಹಿತ್ಯದ ಜನಕನೆಂದು ಪ್ರಖ್ಯಾತಿ ಪಡೆದಿರುವ ಪ್ರೆಂಚ್ ಸಾಹಿತಿ ಮಾಂಟೇನ್ ''ವಿಚಾರ ಲಹರಿಗಳ ಅವತರಣಿಕೆಗಳ ಹಾಗೂ ಉಪಕಥೆಗಳ ಒಂದುಪರಿಪಾಕವೇ ಪ್ರಬಂಧ.'' ಎಂದು ಹೇಳಿದ್ದಾನೆ.



### ಪ್ರಬಂಧದ ತತ್ವಗಳು :

**''ಭಾವಗೀತೆಯಂತಹ ಬಂಧ''** : ಪದ್ಯದಲ್ಲಿ ಭಾವಗೀತೆ ಹೇಗೋ ಹಾಗೆ ಗದ್ಯದಲ್ಲಿ ಪ್ರಬಂಧವೆಂದು ಹೇಳಲಾಗುತ್ತದೆ. ಏಕೆಂದರೆ ಪ್ರಬಂಧನಕಾರನಾದರೂ ಕವಿಯ ಹಾಗೆಯೇ ಭಾವದ ಬೆನ್ನೇರಿ ಕಲ್ಪನೆಯ ಗರಿಗೆದರಿ ತನ್ನ ವರ್ಣ ರಂಜಿತ ಅನುಬೂತಿ ಮತ್ತು ಚಿಂತನೆಯ ವಿಲಾಸ - ವೈಭವಗಳನ್ನು ಸಮ್ಮೋಹಕವಾಗಿ ಬೆಳಗುತ್ತಾನೆ. ಅಂತೂ ಭಾವಗೀತೆಯಂತಹ ಭಾವಮಯತೆ, ಸಂಕ್ಷಿಪ್ತತೆ, ಸ್ವಯಂ ಪೂರ್ಣತೆಗಳುಳ್ಳ ಗಾತ್ರದಲ್ಲಿ ಕಿರಿದಾದರೂ ಗುಣದಲ್ಲಿ ಹಿರಿದಾದ ಗದ್ಯ ರಚನೆಯೇ ಪ್ರಬಂಧವಾಗಿದೆ.

**''ವ್ಯಕ್ತಿತ್ವದ ಹೊಳಹು''**: ಕವಿ ಬೇಂದ್ರೆಯವರ ಭಾವಗೀತೆ ಕವನದಲ್ಲಿಯ ಒಂದು ಪಂಕ್ತಿ 'ಒಡಲು ನೂಲಿನಿಂದ ನೇಯುವಂತೆ ಜೇಡ ಜಾ' ಎಂಬುದು ಪ್ರಬಂಧರಚನೆಗೂ ಸಂಗತವಾಗುವಂಥದಾಗಿದೆ. ಜೇಡರ ಹುಳು ತನ್ನ ಒಡಲ ನೂಲಿನಿಂದ ಜಾಲವೊಂದನ್ನು ಸಹಜ ಸುಂದರವಾಗಿ ಕಲಾತ್ಮಕವಾಗಿ ನೇಯುವಂತೆ, ಪ್ರಬಂಧನಕಾರ ತನ್ನ ಅನುಭಾವ ನಿಧಿಯ ಅಂತಃ

ಸತ್ವವನ್ನು ತನ್ನ ವ್ಯಕ್ತಿತ್ವ ವಿಶೇಷದಲ್ಲಿ, ವರ್ಣದಲ್ಲಿ ಅದ್ದಿ ಮಿದ್ದಿ, ತನ್ನ ಸಹಜ ಪ್ರತಿಭಾ ವಿಲಾಸವನ್ನು ಮೆರೆಯುವಂತೆ ಪ್ರಬಂಧವನ್ನು ರಚಿಸುತ್ತಾನೆ. ತಾನು ಕಂಡುಂಡ ಬಾಳ - ಬದುಕಿನ ಓರೆ - ಕೋರೆ ಕಂಚು ಮಿಂಚು, ಸಿಹಿ ಕಹಿಗಳನ್ನು ಭಾವ ಕಲ್ಪನೆಗಳನ್ನು ಅದರಲ್ಲಿ ಸುಳುಹುಗಾಣಿಸುತ್ತಾನೆ. ಹೀಗಾಗಿ ಆತನ ಬರವಣಿಗೆಯಲ್ಲಿ ಆತನ ವ್ಯಕ್ತಿತ್ವದ ಒಂದು ಪ್ರಭಾವ ಮುದ್ರೆ ಒಡಮೂಡುತ್ತದೆ. ಅದರಿಂದಾಗಿಯೇ ಅಂತಹ ಬರವಣಿಗೆ ಓದುಗನಿಗೆ ಆತ್ಮೀಯವೂ ಅಪ್ಯಯಮಾನವೂ ಆಗಿ ಪರಿಣಮಿಸುತ್ತದೆ.

**''ಸ್ವಚ್ಛಂದ ವಿಲಾಸದಲ್ಲೂ ಸೂತ್ರಬದ್ಧತೆ''** : ಪ್ರಬಂಧಕಾರ ತಾನು ಆಯ್ದುಕೊಂಡ ವಿಷಯವನ್ನು ಒಂದು ನೆಪ ಮಾಡಿಕೊಂಡು ಒಂದು ನೆಲೆಯನ್ನಾಗಿಸಿಕೊಂಡು ತನ್ನ ಮನೋಲಹರಿ ಸ್ವಚ್ಛಂದ ವಿಲಾಸದಲ್ಲಿ ಗರಿಗೆದುರುವಂತೆ ಮಾಡುತ್ತಾನೆ. ಅದರೊಂದಿಗೆ ತನ್ನ ಊಹೆ ವಿಚಾರ ಭಾವ ಅನುಭವಗಳನ್ನು ತೆಗೆದು ಬಿಡುತ್ತಾನೆ. ಇದು ಸ್ಥೂಲ ಸ್ವರೂಪದಲ್ಲಿ ಅನಿಯಂತ್ರಿತವಾದ ಅಬದ್ಧ ಅವ್ಯವಸ್ಥಿತ ಲೀಲಾವಿಲಾಸವಾಗಿ ಭಾಸವಾಗುವ ಸಂಭವವಿಲ್ಲದಿಲ್ಲ. ಆದರೆ ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಅಂಥವರಲ್ಲೂ ಒಂದು ತನ್ನದೇ ಆದ ಕಟ್ಟು ಕ್ರಮಬದ್ಧತೆ ಏರ್ಪಾಡು ಏಕಸೂತ್ರತೆ ಕಂಡುಬರದಿರದು.

**''ಶೈಲಿಯ ರೋಚಕತೆ''** : ವಿಷಯ ಯಾವುದೇ ಆಗಿದ್ದರೂ ಅದನ್ನು ಸಾಮಾನ್ಯವಾಗಿ ಲಘು ಮನೋಭಾವದಿಂದಲೆ ಪರಿಭಾವಿಸಿ ಪ್ರಬಂಧ ರಚನೆಯನ್ನು ನಿರ್ವಹಿಸಲಾಗುತ್ತದ. ಹೀಗಾಗಿ ಒಂದಿಲ್ಲೊಂದು ಬಗೆಯ ಹಾಸ್ಯವೇ ಪ್ರಬಂಧದ ಹಾಸುಹೊಕ್ಕಾಗಿರುತ್ತದೆ. ಈ ಹಾಸ್ಯದ ಹೊಗರು ಒಗರುಗಳೇ ಓದುಗನ ಮನಸ್ಸನ್ನು ಸೆಳೆಯುವ, ಸ್ಪಂದಿಸುವಂತೆ ಮಾಡುವ ಸತ್ವ ವಿಶೇಷಗಳಾಗಿವೆ. ಈ ಬಗೆಯ ಹಾಸ್ಯದ ಹೊಮ್ಮುವಿಕೆ ಚಿಮ್ಮುವಿಕೆ ಗಾಗಿ ಪ್ರಬಂಧಕಾರ ಒಮ್ಮೊಮ್ಮೆ ಹೆರವರದ್ದು ಮಾತ್ರವಲ್ಲ ತನ್ನ ಮೂರ್ಖತನ ಅವಿವೇಕಾದಿಗಳನ್ನು ಲೀಲಾಜಾಲವಾಗಿ ಬಿಚ್ಚಿ ತೋರುವುದು ಉಂಟು. ಅಂತು ಪ್ರಬಂಧದ ರೋಚಕತೆ ರಮ್ಯತೆಗೆ ಅನುಕೂಲವಾದ ಶೈಲಿಯನ್ನೇ ಪ್ರಬಂಧಕಾರ ಬಳಸಿಕೊಳ್ಳುತ್ತಾನೆ.

ಪಾಟೀಲರು ಇವೆಲ್ಲಾ ನಿಯಮಗಳನ್ನು ಅನುಸರಿಸಿಕೊಂಡು, ಎರಡು ಪ್ರಬಂಧ ರಚನೆ ಮಾಡಿದ್ದಾರೆ. 1) 'ಹಳ್ಳಿಯ ಹವಳಗಳು' ಇದು ವ್ಯಕ್ತಿ ಚಿತ್ರಣಕ್ಕೆ ಸಂಬಂಧಿಸಿದೆ. 2) 'ಸಾಹಿತಿಗಳ ಸಹವಾಸದಲ್ಲಿ' ಇದು ಲಲಿತ ಪ್ರಬಂಧಗಳ ಸಾಲಿಗೆ ಸೇರಿದ ಹಾಸ್ಯ ಕೃತಿಯಾಗಿದೆ.

## 1. ಹಳ್ಳಿಯ ಹವಳಗಳು :

ಸಿದ್ಧರಾಮ ಪೋಲೀಸ ಪಾಟೀಲರ ಮೊದಲನೆಯ ಗದ್ಯ ಕೃತಿ 'ಹಳ್ಳಿಯ ಹವಳಗಳು'. ಜನಜೀವನದ ವಿವಿಧ ವಿರಾಟ ಸ್ವರೂಪದ ಆಷಾಡ ಭೂತಿತನ, ಢಂಬಾಚಾರ, ವಿಚಿತ್ರ ಸ್ವಭಾವ ನಡೆ ನುಡಿ, ಹಾಸ್ಯ ಪ್ರಸಂಗಗಳ ವರ್ಣನೆ ಇದರಲ್ಲಿದೆ. ಮನುಷ್ಯ ಸ್ವಭಾವ ವಿಚಿತ್ರ ಪ್ರತಿಯೊಬ್ಬನೂ ಒಂದು ಇತಿಹಾಸಕ್ಕೆ ನಾಯಕನೆ ಪಾಟೀಲರು ಸೂಕ್ಷ್ಮ ದೃಷ್ಟಿಯಿಂದ ಕಣ್ಣು ಬಿಟ್ಟು ನೋಡಿ ಮನುಷ್ಯ ಸ್ವಭಾವವನ್ನು ಅರಿತು ಇಲ್ಲಿ ಚಿತ್ರಿಸಿದ್ದಾರೆ. ಈ ಯಾಂತ್ರಿಕ ಜೀವನದಲ್ಲಿಯೂ ಇನ್ನೂ ಇಷ್ಟಾದರೂ ಸರಸ ಸ್ವಾರಸ್ಯ ಇರುವುದು ನಮ್ಮ ಸುದೈವ ಪಾಟೀಲರು ಚಿತ್ರಿಸಿರುವುದು, ತಮ್ಮ ಹಳ್ಳಿಯ, ತಮ್ಮ ನೆರೆ ಹೊರೆಯ ಪಾತ್ರಗಳನ್ನೆ. ಅವರಾರೂ ಪುರಾಣದ ಅಥವಾ ಇತಿಹಾಸದ ವೀರರಲ್ಲ ಅಂಥ ವ್ಯಕ್ತಿಗಳು ಪ್ರತಿ ಹಳ್ಳಿಗಳಲ್ಲಿಯೂ ಇರಬಹುದು ಇದ್ದಾರೆ. ಹೆಸರುಗಳೇ ಸೂಚಿಸುವಂತೆ ಸಿಡುಕಿನ ಸಿದ್ದಯ್ಯ, ದುಂದುಗಾರ ದೇವಪ್ಪ, ಲಬಾಡ, ಲಚ್ಚೆಪ್ಪ, ಮಾತಿನ ಮಲ್ಲೇಶ, ಸಾಹುಕಾರ ಸಂಗಪ್ಪ, ಕೂಳುಬಾಕ ಕಲ್ಲೇಣಿ, ಕುಡುಕ ಕೋಮಣ್ಣ ಇವರ ಹೆಸರುಗಳ ಹಿಂದೆ ಸೇರಿರುವ ವಿಶೆಷಣಗಳು ಅವರ ಸ್ವಭಾವ ಮತ್ತು ಗುಣ ಕಾರ್ಯಗಳನ್ನು ನೋಡಿ ಜನತೆ ಅವರಿಗೆ ಕೊಟ್ಟ ಬಿರುದುಗಳಾಗಿವೆ. ಈ ಪಾತ್ರಗಳೆಲ್ಲ ಈಗಲೂ ಜೀವಂತವಾಗಿ ಓದುಗರ ಎದುರಿಗೆ ತಿರುಗಾಡುತ್ತವೆ.

ಸಿದ್ಧರಾಮ ಪಾಟೀಲರಿಗೆ ಮನುಷ್ಯನನ್ನು ಸಹಾನುಭೂತಿಯಿಂದ ನೋಡಿ ಅವನ ಗುಣಗಳನ್ನು ಮೆಚ್ಚಿ, ದೋಷಗಳನ್ನು ವಿಡಂಬನೆ ಮಾಡಿ, ಗೇಲಿ ಮಾಡಿ ಅವನಿಗೆ ಕೆಲವು ವಿವೇಕದ ಮಾತುಗಳನ್ನು ಹೇಳಿ, ಅವನ ಭವಿಷ್ಯವನ್ನು ಹಸನುಮಾಡುವ ಆಶಾವಾದಿತ್ವ ಇದೆ. ನಮ್ಮ ಗ್ರಾಮಾಂತರ ಜನರಲ್ಲಿ ಎದ್ದು ಕಾಣುವ ವಿಚಿತ್ರ ಸ್ವಭಾವ, ನಡವಳಿಕೆ, ವೈಪರಿತ್ಯಗಳ ಚಿತ್ರಣವೇ ಈ 'ಹಳ್ಳಿಯ ಹವಳಗಳು' ಎಂಬ ಸಣ್ಣ ಗ್ರಂಥ. ಎಲ್ಲ ಹಳ್ಳಿಗಳಲ್ಲಿಯೂ ಇರುವ ನೈಜ ಸ್ಥಿತಿ ಆದುದರಿಂದ ಇದರಲ್ಲಿ ಸೊಬಗು, ವಾಸ್ತವಿಕತೆ, ತಿರುಳ, ಸ್ವಭಾವ ವರ್ಣನೆ ತುಂಬಿದೆ. ಈ ಎಲ್ಲ ಚಿತ್ರಗಳ ವ್ಯಕ್ತಿಗಳನ್ನು ಪಾಟೀಲರು ತಮ್ಮ ಜೀವನವನ್ನು ಪ್ರೀತಿಸುವಂತೆ ಪ್ರೀತಿಸುತ್ತಾರೆ. ಅವರು ತಮ್ಮ ಪಾತ್ರಗಳ ನಡಿಗೆಗಳನ್ನೆಲ್ಲ ಸೂಕ್ಷ್ಮವಾಗಿ ಪರಿಶೀಲಿಸಿ ಗುಣ ದೋಷಗಳಿಗಿಂತ ಹೆಚ್ಚಾಗಿ ಸ್ವಭಾವವನ್ನು ವರ್ಣಿಸಿದ್ದಾರೆ. ಹಳ್ಳಿಯ ಜನರ ಗುಣದೋಷ, ನಡವಳಿಕೆಗಳನ್ನು ಗುರುತಿಸಿ ಆಕರ್ಷಣೀಯವಾಗಿ ಹೇಳುವ ಕಲೆ ಪಾಟೀಲರಿಗೆ ಇದೆ. ನಮ್ಮ ಹಳ್ಳಿಗಾಡಿನ ಜನರೂ ಸಹ ತುಂಬ ಜಾಣರು, ರಸಿಕರು. ಜೀವನದಲ್ಲಿ ಸ್ವಾರಸ್ಯರಸ, ಹಾಸ್ಯ ಇವಕ್ಕೆ ತಕ್ಷಣವೇ ತುಂಬಿ ಉಲ್ಲಾಸದಿಂದ ಪ್ರತಿಕ್ರಿಯಿಸುತ್ತಾರೆ.

**'ಸಿಡುಕಿನ ಸಿದ್ದಯ್ಯ'** ಯಾವಾಗಲೂ ಗದ್ದಲದ ಮನುಷ್ಯ, ಕೆಲಸಕ್ಕಿಂತ ಕೂಗಾಟವೇ ಹೆಚ್ಚು . ಕೆಲಸಕ್ಕೆ ಆಳುಗಳು ಹೊತ್ತುಮೀರಿ ಬಂದರೆ ''ಏನೋ ಮೂರ್ಖ ಮೊಮ್ಮಗನೆ ಸಿಕ್ಕಾಗ ಬರಲಾಕ ಇದೇನು ಅಪ್ಪನ ದಾಸೋಹ ಅಂತ ತಿಳಿದೀಯೇನು ?'' ಎಂದು ಗದರಿಸುವನು. ಈ ರೀತಿ ಆಳುಗಳಿಗೆ ಬೈಯುವುದರಿಂದ ತೊಂದರೆ ಆಗಿ ಅವನ ಕೆಲಸಗಳೇ ಕೆಡುವವು.

**'ದುಂದುಗಾರ ದೇವಪ್ಪ'** ಸುಖಲೋಲುಪತೆಯ ಜೀವನಕ್ಕೆ ಬಿದ್ದು ವ್ಯವಸಾಯವನ್ನು ನಿರ್ಲಕ್ಷಿಸಿ ಮನೆಯನ್ನೇ ಜೂಜಿನ ಕಟ್ಟೆಯನ್ನಾಗಿ ಮಾಡಿ, ಇಸ್ಪೀಟು, ಮಟಕಾ, ಪ್ರಾರಂಭಿಸಿದ, ಇದರಿಂದ ಜಮೀನುಗಳನ್ನೇ ಜೀವನಕ್ಕಾಗಿ ಮಾರಬೇಕಾಯಿತು. 'ಸಿಕ್ಕಂತೆ ಸುರಿದರೆ ರೊಕ್ಕ ಉಳಿದೀತೇ?'

**'ಲಬಾಡ ಲಚ್ಚಪ್ಪ'**ನಿಗೆ ಯಾರಿಗಾದರೂ ಕೆಡಕು ಮಾಡಬೇಕೆಂಬ ಉದ್ದೇಶವಿರಲಿಲ್ಲ ಆದರೆ ಸುಳ್ಳು ಹೇಳುವುದು ಅವನ ಚಟವಾಯಿತು. ಒಂದು ಸುಳ್ಳಿಗೆ ಮತ್ತೊಂದು ಸುಳ್ಳು, ಆದಕ್ಕೆ ಮತ್ತೊಂದು ಸುಳ್ಳು, ಹೀಗೆ ಸುಳ್ಳುಗಳ ಸರಮಾಲೆ ''ಸುಳ್ಳು ಹ್ಯಾಂಗಿರಬೇಕು ಎಂದರೆ ಸತ್ಯದ ತಲಿಮ್ಯಾಲ ಹೊಡೆದಾಂಗ ಇರಬೇಕು.'' ಎಂಬುದು ಲಚ್ಚಪ್ಪನ ಮಾತಾಗಿತ್ತು.

**' ಮಾತಿನ ಮಲ್ಲೇಶ'** ಎಂಬುದು ಸೊಗಸಾದ ಪ್ರಬಂಧ ಮಲ್ಲೇಶ ಅನೇಕ ಕಷ್ಟಗಳನ್ನು ಅನುಭವಿಸಿ ಹಣ್ಣಾಗಿ ಮಾತನಾಡುವದು ಒಂದು ಚಟವಾಗಿ, ಕೊನೆಯಲ್ಲಿ ಅದರ ಮೂಲಕವಾಗಿಯೇ ಜ್ಞಾನ ಸಂಪಾದನೆಯನ್ನು ಮಾಡಿ ಜನರಿಗೆ ನೀತಿಯನ್ನು ಸನ್ಮಾರ್ಗವನ್ನು ಭೋಧಿಸುವ ಮಾರ್ಗದರ್ಶಿಯಾದನು.

**'ಸಾಹುಕಾರ ಸಂಗಪ್ಪನ'** ಚಿತ್ರಣ ನಿಜವಾಗಿ ಸ್ವಾರಸ್ಯವಾಗಿದೆ. ಹಳ್ಳಿಗಳಲ್ಲಿ ಜನರು ಹಾಸ್ಯಕ್ಕಾಗಿಯೇ ತೀರ ಬಡವನನ್ನು 'ಸಾಹುಕಾರ' ಎಂದು ಕರೆದು ಬಿಡುತ್ತಾರೆ. ಜನರ ಬಾಯಲ್ಲಿ ಬಂದು ಅದೇ ಆ ಮನುಷ್ಯನಿಗೆ ಖಾಯಂ ಆಗುತ್ತದೆ. ಈ ಪ್ರಬಂಧದಲ್ಲಿ ಉದ್ದಕ್ಕೂ ಬಹುಮಟ್ಟಿಗೆ ಹಾಸ್ಯ ವಿನೋದ ಮನುಷ್ಯ ಸ್ವಭಾವದ ನಿರೀಕ್ಷಣಾ ನಿರೂಪಣೆ ಇದೆ. ಸಂಭಾಷಣೆ ಆಕರ್ಷಕವಾಗಿದೆ. ಆಸಂಭಾವ್ಯ ಯಾವುದೂ ಇಲ್ಲ. ಇದೊಂದು ವಾಸ್ತವವಾಗಿ ನಡೆದ ಮತ್ತು ನಡೆಯಬಹುದಾದ ಘಟನೆಯಾದರೂ, ಕಲಾತ್ಮಕವಾಗಿ, ಅಲೌಕಿಕವಾಗಿದೆ.

**'ಕೂಳುಬಾಕ ಕಲ್ಲೇಣಿ'** ಸಹ ಆಕರ್ಷಣೀಯವಾದ ಚಿತ್ರಣ. ಕಲ್ಲೇಣಿಯಲ್ಲಿ ಹೊಟ್ಟೆ ಬಾಕತನದ ಹೊರತು ಮತ್ತಾವ ದೋಷವೂ ಇಲ್ಲ. ಕಲ್ಲೇಣಿ ಸ್ವಭಾವದಿಂದ ಸೋಮಾರಿ ಜೀವನವನ್ನು ಅತಿ ಹೊರೆ ಅಥವಾ ಗಂಭೀರವಾಗಿ ತೆಗೆದುಕೊಳ್ಳದೆ ಅಂಟಿಯೂ ಅಂಟದೆ ತಾವರೆಯ ಮೇಲಿನ ನೀರ ಹನಿಯಂತೆ ಸರಾಗವಾಗಿ ನೂಕಲು ಪ್ರಯತ್ನಿಸುವವ. ಕಲ್ಲೇಣಿ ನಿರಾಸಕ್ತನೂ ದೇಹವನ್ನು ಇಷ್ಟಬಂದಂತೆ ಬೆಳೆಯಲು ಬಿಟ್ಟುದರಿಂದ ಸ್ಥೂಲ ಕಾಯನೂ ಆಗಿದ್ದಾನೆ ಊಟದಲ್ಲಿ ಬಕಾಸುರ, ನಿದ್ರೆಯಲ್ಲಿ ಕುಂಬಕರ್ಣ ಕಲ್ಲೇಣಿ ದಪ್ಪನೆಯ ಧಡೂತಿ ಆಸಾಮಿ. ಅವನಲ್ಲಿ ಮೋಸ ವಂಚನೆ ಇಲ್ಲ. ಕೂಳುಬಾಕ ಕಲ್ಲೇಣಿಯಿಂದ ಯಾರಿಗೂ ತೊಂದರೆ ಇಲ್ಲ. ಅವನಿಂದ ಸಮಾಜಕ್ಕೆ ಒಳ್ಳೆಯದೇ ಆಗುತ್ತಿದೆ. ಅವನಿಂದ ಚಿಕ್ಕವರಿಗೂ ಯುವಕರಿಗೂ ಸ್ಫೂರ್ತಿ.

ಈ ಸಂಕಲನದಲ್ಲಿ **'ಕುಡುಕ ಕೋಮಣ್ಣ'**ನದು ಕೊನೆಯ ಚಿತ್ರಣ. ಕುಡಿತದ ಚಟಕ್ಕೆ ಬಿದ್ದು, ಬೇಸಾಯವನ್ನು ಸರಿಯಾಗಿ ಮಾಡದೆ, ಸದಾ ಹೆಂಡತಿಯನ್ನು ಸಹ ಹೊಡೆಯುವ ಕೋಮಣ್ಣ, ಊರಿನಲ್ಲಿ ಮಾನ ಕಳೆದುಕೊಂಡು ಬಾಳುತ್ತಾನೆ. ಕೋಮಣ್ಣ ಒಂದು ದಿನ ಶ್ರೀಶೈಲಕ್ಕೂ ಹೋಗಿ ''ಕುಡಿಯುವುದನ್ನು ಬಿಟ್ಟೆ'' ಎಂದು ಪ್ರತಿಜ್ಞೆ ಮಾಡಿ ಬಂದನು. ಆದರೆ ಕುಡಿಯುವುದು ನಡದೇ ಇತ್ತು. ದೇವಸ್ತಾನಕ್ಕೆ ಹೋದ ಮಾತ್ರಕ್ಕೆ ದುಷ್ಟನು ಸುಧಾರಿಸುವದಕ್ಕೆ ಆಗುವುದಿಲ್ಲ.

ಈ ಎಲ್ಲ ಚಿತ್ರಗಳು ಗ್ರಾಮ ಜೀವನದ ವಿವಿಧ ಮುಖಗಳ ವ್ಯಕ್ತಿಗಳ ಚಿತ್ರಣವನ್ನು ನಮ್ಮ ಮುಂದೆ ತರುತ್ತವೆ. ಪಾಟೀಲರ ಎಷ್ಟು ಸ್ಪಷ್ಟವಾಗಿಯೂ ಕರಾರುವಕ್ಕಾಗಿಯೂ ವರ್ಣಿಸುತ್ತಾರೆಂದರೆ ಅವರ ಮುಂದೆ ಆ ಮುಖಗಳು ಇವೆಯೇ ಎಂದು ನಮಗೆ ಭಾಸವಾಗುತ್ತದೆ. ಪ್ರತಿಯೊಂದು ಚಿತ್ರವೂ ಬಿಡಿ ಬಿಡಿಯಾಗಿ ವಿಶಿಷ್ಟವಾದ ಗುಣಗಳುಳ್ಳದ್ದಾಗಿದೆ ಇಂತಹ ಚಿತ್ರ ರಚನೆಗೆ ಪಾಟೀಲರ ಶೈಲಿ ತುಂಬ ಹೊಂದುತ್ತದೆ ಇವರ ಶೈಲಿಯಲ್ಲಿ ಶಕ್ತವಾದ ನೈಜ ಜನಪದ ಗ್ರಾಮಿಣ ನುಡಿಗಟ್ಟು ಮರಾಠಿ, ಕನ್ನಡ, ಉರ್ದು ಮಾತುಗಳು ಆಕರ್ಷಣೀಯ ಸಮ್ಮಿಶ್ರಣವಿದೆ. ಕೆಲವೆಡೆ ಪಾಟೀಲರ ಇತರ ಕೃತಿಗಳನ್ನು ಓದಿದಾಗ ಅವರು ಗಂಭೀರವಾಗಿ, ತುಂಬ ಮಾರ್ಮಿಕವಾಗಿ ಹೃದಯಾಂತರಾಳವನ್ನು ಮುಟ್ಟಬಲ್ಲ ಭಾವಗಳನ್ನು ವ್ಯಕ್ತ ಮಾಡುವ ಸಾಮರ್ಥ್ಯವುಳ್ಳವರೆಂಬುದು ಗೊತ್ತಾಗುತ್ತದೆ.

ಸಿದ್ಧರಾಮ ಪೋಲೀಸ ಪಾಟೀಲರು ಹಳ್ಳಿಯವರು ಹಳ್ಳಿಯ ಹವೆಯಲ್ಲಿಯೇ ಹುಟ್ಟಿ ಬೆಳೆದವರು. ಹಳ್ಳಿಯವರ ಒಡನಾಟದಿಂದ ಅವರಿಗೆ ಸಂತೋಷವಾಗುತ್ತಿತ್ತು. ತಮ್ಮೆಲ್ಲ ಕಷ್ಟ

ನಷ್ಟಗಳನ್ನು ನುಂಗಿಕೊಂಡು ಸದಾ ಹಸನ್ಮುಖಿಗಳಾಗಿ, ಪ್ರತಿಯೊಂದು ಕೆಲಸದಲ್ಲಿ ಸಂತೋಷವನ್ನೇ ಕಂಡುಕೊಳ್ಳುವ ಅವರು ನಿಜವಾಗಿಯೂ ಶ್ರೇಷ್ಠರು. ಪ್ರತಿಯೊಬ್ಬ ವ್ಯಕ್ತಿಯೂ ಒಂದೊಂದು ವಿಶಿಷ್ಟ ಗುಣವುಳ್ಳವನೇ ಆಗಿರುತ್ತಾನೆ. ಒಬ್ಬರ ಗುಣ ಇನ್ನೊಬ್ಬರಿಗಿಲ್ಲ. ಹಾಸ್ಯ ವ್ಯಂಗ್ಯ ಶೃಂಗಾರ ಅವರ ಜೀವನದಲ್ಲಿ ಬಂದಂತಹ ಗುಣಗಳು ಇಂಥ ಕೆಲ ಗುಣಗಳನ್ನುಳ್ಳ ವ್ಯಕ್ತಿ ಚಿತ್ರಣವನ್ನು ಬರೆಯಬೇಕೆಂದು ಪಾಟೀಲರು ಬಹಳ ದಿನಗಳಿಂದ ವಿಚಾರಿಸುತ್ತಿದ್ದರು. ಆ ಚಿಂತನದ ಫಲವೇ ಈ ಹೊತ್ತಿಗೆಯಲ್ಲಿ ಬರುವ ಏಳು ಜನರ ವ್ಯಕ್ತಿ ಚಿತ್ರಣವಾಗಿದೆ. ಇದರಲ್ಲಿ ರಸಿಕರೂ ಇದ್ದಾರೆ. ಹರಟೆ ಮಲ್ಲರು ಇದ್ದಾರೆ, ಆತ್ಮ ಶೋಧಕರೂ ಇದ್ದಾರೆ ಮನೋ ದೌರ್ಬಲ್ಯದಿಂದ ಚಟಕ್ಕೆ ಅಂಟಿಕೊಂಡು ಜೀವನವನ್ನೇ ದುರಂತಮಯವಾಗಿಸಿಕೊಂಡ ವ್ಯಕ್ತಿಗಳೂ ಇದ್ದಾರೆ. ಎಲ್ಲರೂ ಒಂದೊಂದು ನಮೂನೆ ಪ್ರತಿಯೊಬ್ಬ ವ್ಯಕ್ತಿ ಮನುಷ್ಯನಾಗಿ ಜನಿಸಿದ ಬಳಿಕ ತನ್ನ ಬಾಳಿನಿಂದ ಒಂದು ನೀತಿಯನ್ನು ಹೊರಗೆಡಹುತ್ತಾನೆ. ಅದನ್ನು ಗ್ರಹಿಸುವವ ಬೇಕು. ಅಷ್ಟೇ. ''ಜಿಜ್ಞಾಸೆಯಿಂದ ನೋಡಿದರೆ ಜೇನು ಹುಳು ಕೂಡ ಜೀವನಕ್ಕೊಂದು ಪಾಠವನ್ನು ಒದಗಿಸುವುದಿಲ್ಲವೆ ?''[19] ಹಾಗೆಯೇ ಸೂಕ್ಷ್ಮ ಗ್ರಾಹಿಯಾದ ಮನುಷ್ಯ ಯಾವ ಜ್ಞಾನವನ್ನು ಪಡೆಯಲಿಲ್ಲದ ಜನರಿಂದಲೇ ಹೆಚ್ಚು ಜ್ಞಾನವನ್ನು ಪಡೆದುಕೊಳ್ಳುತ್ತಾನೆ.

ಈ ಹೊತ್ತಿಗೆಯಲ್ಲಿ ಬರುವ ಎಲ್ಲ ವ್ಯಕ್ತಿಗಳೂ ನಮ್ಮೂರವರೆಂದು ಲೇಖಕರು ಹೇಳಿಕೊಂಡಿದ್ದರೂ , ಅವರು ಬರೀ ತಮ್ಮ ಊರಿಗೆ ಮಾತ್ರ ಸೀಮಿತಗೊಂಡವರಲ್ಲ ಇಂಥವರು ನಿಮ್ಮ ಊರಲ್ಲಿಯು ಇರಬಹುದು, ಬೇರೇ ಊರುಗಳಲ್ಲಿಯೂ ಇರಬಹುದು. ಸರ್ವೇ ಸಾಮಾನ್ಯವಾಗಿ ನಮ್ಮ ಭಾಗದ ಎಲ್ಲ ಹಳ್ಳಿಗಳಲ್ಲಿ ಕಾಣಸಿಗುವಂಥ ವ್ಯಕ್ತಿಗಳು ಇವರು ಯಾರೇ ಆಗಲಿ, ಇದು ತನ್ನ ವ್ಯಕ್ತಿತ್ವ, ತನ್ನದೇ ಕುರಿತು ಬರೆದದ್ದು ಎಂದು ತಪ್ಪು ಗ್ರಹಿಕೆ ಮಾಡಿಕೊಳ್ಳಬಾರದು. ಯಾರದೋ ಒಬ್ಬನ, ಯಾವದೋ ಒಂದು ಘಟನೆ ಅಥವಾ ನಡವಳಿಕೆ ಬರಹಕ್ಕೆ ಪ್ರೇರಕ ಶಕ್ತಿಯಾಗಿರಬಹುದು. ಇಲ್ಲವೆ ಆಕಸ್ಮಿಕವಾಗಿ ಸೇರಿರಲೂ ಬಹುದು. ಅಂದ ಮಾತ್ರಕ್ಕೆ ಅದು ಸಂಪುರ್ಣ ತನ್ನದೇ ಎಂದು ತಿಳಿದುಕೊಳ್ಳುವುದು ಸರಿಯಲ್ಲ ಎಂದು ಪಾಟೀಲರು ಹೇಳುತ್ತಾರೆ.

ಹವಳಗಳು ಸ್ವಯಂ ಪ್ರಕಾಶ ಹೊಂದಿಲ್ಲದಿದ್ದರೂ ಅದಕ್ಕೆ ಬೆಲೆಯುಂಟು. ಈ ವ್ಯಕ್ತಿಗಳೂ ಹಾಗೆಯೇ. ಇವರಿಗೆ ಮೂಲತಃ ಯಾವುದೇ ಹೆಸರು, ಪ್ರಸಿದ್ಧಿ ಇಲ್ಲದಿದ್ದರೂ ಇವರಿಂದ

19. ಬಿ. ಮಹಾದೇವಪ್ಪ

ಕಲಿತುಕೊಳ್ಳಬೇಕಾದ ಪಾಠ ಮಾತ್ರ ಬೆಲೆಯುಳ್ಳದ್ದು ಆದ್ದರಿಂದ ಇವು 'ಹಳ್ಳಿಯ ಹವಳಗಳೇ' ಸರಿ! ಇಂಥ ಇನ್ನೂ ಅನೇಕ ಹವಳಗಳು ಹಳ್ಳಿಗಳಲ್ಲಿವೆ. ಆದರೆ ಹುಡುಕುವ ಸಾಹಸ ಬೇಕು. ಈ ಕೃತಿಯು ಹಳ್ಳಿಯ ಜನರ ಜೀವನದ ಮೇಲೆ ಬೆಳಕು ಚೆಲ್ಲಬಲ್ಲದೆಂದು ಲೇಖಕರು ನಂಬಿದ್ದಾರೆ.

ತಮ್ಮ ಹಳ್ಳಿಯಲ್ಲಿ ತಾವು ಚಿಕ್ಕಂದಿನಲ್ಲಿ ನೋಡಿದ್ದ, ಅವರ ಕಣ್ಣಿಗೆ ಎದ್ದು ಕಂಡಿದ್ದ ಏಳು ಮಂದಿ ಬೇರೆ ಬೇರೆ ಸ್ವಭಾವದ ಜನರನ್ನು ಕುರಿತು ಲೇಖಕರು ಇದರಲ್ಲಿ ಚಿತ್ರಿಸಿದ್ದಾರೆ. ಗಾದೆಯ ಮಾತುಗಳನ್ನು ದಾರಾಳವಾಗಿ ಬಳಸಿದ್ದಾರೆ. ಗುಲಬರ್ಗಾ ಕಡೆಯ ಸಾಮಾನ್ಯ ಜನರ ಆಡು ಮಾತಿನಲ್ಲಿ ಬರೆದಿರುವುದು ಹಳ್ಳಿಯ ಚಿತ್ರಗಳಿಗೆ ಸೊಗಸಾದ ಹಳ್ಳಿಯ ಮೆರುಗನ್ನು ಕೊಡುವುದು.

''ಗ್ರಾಮೀಣ ವ್ಯಕ್ತಿಗಳಲ್ಲಿ ಕಂಡುಬರುವ ವಿಶಿಷ್ಟ ಸದ್ಗುಣ - ದುರ್ಗುಣಗಳು, ಅಜ್ಞಾನ, ಆಲಸ್ಯ, ಮಾತಿನ ಉಡಾಯಿತನ, ಹಾಸ್ಯಪ್ರಿಯತೆ, ರಸಿಕತೆಗಳನ್ನು ಈ ಕೃತಿ ಹೃದಯಂಗಮವಾಗಿ ನೀಡುತ್ತದೆ. ಪ್ರಾದೇಶಿಕ ಭಾಷೆಯ ಸೊಗಡು, ನಾಣ್ಣುಡಿ, ಜಾಣ್ಣುಡಿಗಳ ಸಮರ್ಪಕ ಬಳಕೆ ಇವು ಬರವಣಗೆಗೆ ಸಹಜತೆ, ಪರಿಣಾಮಕಾರಕಗಳನ್ನುಂಟು ಮಾಡಿವೆ. 'ಸಾಹುಕಾರ ಸಂಗಪ್ಪ', 'ಕೂಳುಬಾಕ ಕಲ್ಲೇಣಿ' ಹಾಗೂ 'ಸಿಡುಕಿನ ಸಿದ್ದಯ್ಯ' ಇವರು ಮನಸ್ಸನ್ನು ಸೂರೆಗೊಳ್ಳುವರು. ಸಾಹಿತ್ಯ ಕಾರ್ಯ ಭೋಧನೆಯಲ್ಲಿ ಎಂದು ಹೇಳಿದರೂ ಶ್ರೀ ಸಾವಮಾನ್ಯರಿಗೆ ಇದು ಅನೇಕ ಸಲ ಪ್ರಯೋಜನಕಾರಿಯಾಗಲೂ ಬಹುದು ಆದುದರಿಂದ ಇಲ್ಲಿಯ ವ್ಯಕ್ತಿ ಚಿತ್ರಣಗಳ ಕೊನೆಯಲ್ಲಿ ಸೂಚ್ಯವಾಗಿ ಬರುವ ಕೆಲವು ಹಿತ ವಚನಗಳು ದೋಷಗಳಿಗೆ ದೋಷ ಮುಕ್ತರಾಗುವ ಅವಕಾಶವನ್ನು ದೋಷಗಳ ಸೆಳೆತಕ್ಕೆ ಒಳಗಾಗಬಹುದಾದ ಜನಕ್ಕೆ ಎಚ್ಚರಿಕೆಯ ಫಲಕವನ್ನು ಹಿಡಿಯುತ್ತವೆ. ರಸಿಕರಿಗೆ ರಸದೌತಣವೂ ಇದೆ.''[20]

ಆಡು ನುಡಿಗಳಿಂದ, ಗಾದೆ ಮಾತಿನಿಂದ, ದೇಶಿ ಪದದ ಪ್ರಯೋಗದಿಂದ, ಗ್ರಾಮಿಣ ಗಾಢ ಅನುಭವದಿಂದ, ಸಿದ್ಧರಾಮ ಪೋಲೀಸ ಪಾಟೀಲರು ಇಲ್ಲಿ ಬರೆದಿರುವ ವ್ಯಕ್ತಿಗಳ ಚಿತ್ರ ನಮ್ಮ ಕಣ್ಣೆದುರಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

---

20. ಹಳ್ಳಿಯ ಹವಳಗಳು - ಪ್ರೊ. ಪಿ.ವ್ಹಿ. ಮಲ್ಲಾಪೂರ (ಹಿನ್ನುಡಿಯಿಂದ)

**ಸಾಹಿತಿಗಳ ಸಹವಾಸದಲ್ಲಿ ( ನಾ ಮಾಡ್ಕೊಂಡ ಹಜಾಮತಿ ) :**

''ಲಲಿತ ಪ್ರಬಂಧಗಳ ಸಾಲಿಗೆ ಸೇರಿದ ಈ ಕೃತಿಯನ್ನು ಪಾಟೀಲರು ತಮ್ಮ ಸಾಹಿತ್ಯಿಕ ಚಿಂತನೆಯಿಂದ , ನಮ್ಮ ಸುತ್ತಲಿನ ಪರಿಸರದಲ್ಲಿ ನಡೆಯುವ ಸಹಜ ಘಟನೆಗಳನ್ನೇ ಹೊಸ ದೃಷ್ಟಿಕೋನದಿಂದ ನೋಡಿದ್ದಾರೆ. ವಿಷಯ ವೈವಿಧ್ಯದಿಂದ ಹಾಗೂ ವಸ್ತುಗಳನ್ನು ನಿರೂಪಿಸುವುದರಲ್ಲಿ ಹೊಸತನವನ್ನು ತೋರಿದ್ದಾರೆ. ಇಂಗ್ಲೀಷ ಸಾಹಿತ್ಯದ ಪ್ರಭಾವದಿಂದ ಕನ್ನಡದಲ್ಲಿ ಪ್ರಬಂಧ ಸಾಹಿತ್ಯ ಹುಲುಸಾಗಿ ಬೆಳೆಯುತ್ತಿರುವುದು ಸಂತೋಷವಾಗಿದೆ. ಇಲ್ಲಿನ ಹನ್ನೆರಡು ಲಲಿತ ಪ್ರಬಂಧಗಳು ತಮ್ಮದೇ ಆದ ರೀತಿಯಲ್ಲಿ ಆನಂದವನ್ನು ಉಂಟು ಮಾಡಿವೆ. ಇಂದಿನ ನಾಗರಿಕ ಸಮಾಜದಲ್ಲಿ ಪ್ರತಿ ಮುಂಜಾನೆ ಚಹ ಕುಡಿದು ದಿನಪತ್ರಿಕೆ ಓದುವುದು ಹಾಗೂ ಮುಖ ಕ್ಷೌರ ಮಾಡಿಕೊಂಡೆ ಜೀವನದ ಚಟುವಟಿಕೆಗಳು ಪ್ರಾರಂಭವಾಗುವುದು ಸರ್ವೇ ಸಾಮಾನ್ಯ. ಆದರೆ ನಾ ಮಾಡ್ಕೊಂಡ ಹಜಾಮತಿಯಲ್ಲಿ ವಿಶಿಷ್ಟ ಅನುಭವಗಳೊಡನೆ ನಮ್ಮನ್ನು ರಂಜಿಸಿದ್ದಾರೆ. ಪಾಟೀಲರು ಒಳ್ಳೆಯ ಲಲಿತ ಪ್ರಬಂಧಕಾರರಾಗುವ ಭರವಸೆಯನ್ನು ತಮ್ಮ ಈ ಕೃತಿಯ ಮೂಲಕ ಮೂಡಿಸಿದ್ದಾರೆ.''

ಒಟ್ಟಾರೆ ಇದೊಂದು ಪ್ರಬಂಧ ಸಂಕಲನ ಎನ್ನುವದಕ್ಕಿಂತ ಉತ್ತಮವಾದ ಹರಟೆಗಳ ನಗೆ ಲೇಖನ ಸಂಕಲನವಾಗಿ ಮನಸ್ಸಿಗೆ ಓದಲು ಖುಷಿ ಕೊಡುತ್ತದೆ. ಓದುತ್ತಾ ಅಪ ರೂಪವಾಗಿ ದೊರಕುವ ವಸ್ತುವಾಗಿರುವ ನಗೆಯನ್ನು ಹಲವು ಸಲ ಸಹಜವಾಗಿ ಉಕ್ಕಿಸುವಂತಹ ಉತ್ತಮ ವಿಡಂಬಕತೆಯನ್ನು ತುಂಬಿರುವ ಪಾಟೀಲರು ಈ ಸಂಕಲನದಲ್ಲಿ ನಗೆ ಲೇಖಕರಾಗಿ ಕಂಡುಬರುತ್ತಾರೆ. ಪ್ರಬಂಧ ಓದಿದ ತಕ್ಷಣ ಸೂಕ್ಷ್ಮ ಪ್ರಜ್ಞೆಗೆ ತಿಳಿಯುವಂತೆ ಮಾಡಿದ್ದು, ಪಾಟೀಲರ ಜಾಣ್ಮೆಯಾಗಿದೆ. ಪೋಲೀಸ್ ಪಾಟೀಲರಂತಹ ಹಿರಿಯ ಸೂಕ್ಷ್ಮ ಮನೋಭಾವದ, ವಿಶಾಲ ಹೃದಯ ಬರಹಗಾರರಲ್ಲಿ ಇಷ್ಟು ನಗಿಸುವ, ವಿಡಂಬಿಸುವ ವ್ಯಕ್ತಿ ಇದ್ದಾರಲ್ಲ ಎಂಬ ಮೆಚ್ಚುಗೆ ಈ ಸಂಕಲನ ಓದಿದವರಿಗೆ ಅನುಭವವಾಗುತ್ತದೆ. ಆ ದೃಷ್ಟಿಯಿಂದ ಖರೀದಿ ಮಾಡಿ ಓದಲೇಬೇಕಾದ ಸುಂದರ ಹರಟೆಗಳ ಪುಸ್ತಕವಾಗಿದೆ.

ಬರೆಯದೇ ಇರಲಾರೆ ಎನ್ನುವಾಗ ಬರೆದ ಪ್ರಬಂಧಗಳು ಇವು. ಹೇಳಬೇಕಾದ ಸಾಮಗ್ರಿ ಎಷ್ಟು ಹೇಳಬೇಕು, ಎನ್ನುವ ವಿವೇಕ, ಮುಟ್ಟಿಸಬೇಕಾದ ಚುರುಕು. ಓದಿಕೊಂಡು ಹೋಗುವ ಗುಣ,

ಹೊಟ್ಟೆ ಹುಣ್ಣಾಗುವಂಥ ಹಾಸ್ಯ ಓದುತ್ತಲೇ ಇರುವ ಮಾತಿನ ಗಾಡಿ, ಹೇಳಬೇಕಾದ ಸಂದೇಶ ಖಚಿತವಾಗಿರುವಾಗ, ಉತ್ತಮ ಪ್ರಬಂಧವಾಗುವುದರಲ್ಲಿ ಸಂಶಯವಿಲ್ಲ.

'' ಗದ್ಯಂ ಕವಿನಾಂ ನಿಕಷಂ ವದಂತಿ'' ಎನ್ನುವಂತೆ ಕವಿಯೊಬ್ಬ ಪದ್ಯದಲ್ಲಿ ವಿಹರಿಸಹೊರಟಾಗ ಏನಾಗಬಹುದು ? ಎಷ್ಟರ ಮಟ್ಟಿಗೆ ಸಫಲನಾಗಬಹುದು. ಹಿಡಿತ ಸಿಕ್ಕರೆ ಎಷ್ಟು ಹರಟೆ ಹೊಡೆಯಬಹುದು. ವಿಚಾರಗಳನ್ನು ವಿವರಿಸಬಹುದು. ಅನುಭವದ ಗಟ್ಟಿ ಸ್ತರವಿದ್ದಾಗ ಬರಹದ ಗಾಳಿಪಟವನ್ನು ಹೇಗೆ ಹಾರಾಡಿಸಬಹುದು ಎಂಬುದಕ್ಕೆ ಸಾಕ್ಷಿಯಾಗಿದೆ. ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ನಾ ಮಾಡ್ಕೊಂಡ ಹಜಾಮತಿ ಸಂಕಲನ.

ಪಾಟೀಲರು ತಮ್ಮ ಸುತ್ತ ಮುತ್ತ ನಡೆಯುವ ಘಟನೆಗಳ ವಿಲಕ್ಷಣತೆ, ದ್ವಂದ್ವ ನೀತಿಯ ವ್ಯಕ್ತಿಗಳು, ಅಘಟಿತ ಘಟನೆಗಳು, ವಿರೋಧಾಭಾಸಗಳಿಗೆ ಕಣ್ಣು, ಕಿವಿ, ತೆರೆದಿಟ್ಟು, ತಮ್ಮ ಜೀವನದಲ್ಲಿಯ ಏರಿಳಿತಗಳಿಗೆ ಸಾಹಿತ್ಯದ ರೂಪ ಕೊಡುವಲ್ಲಿ ಪ್ರಯತ್ನಿಸಿದಾಗ ಈ ಗದ್ಯ ಹುಟ್ಟಿಕೊಂಡಿತು.

ಯಾವುದನ್ನು ಮುಚ್ಚು ಮರೆಯಿಲ್ಲದೆ ಇದ್ದುದನ್ನು ನೈಜವಾಗಿ, ನೇರ, ಸರಳ ಶೈಲಿಯಲ್ಲಿ ನಿರೂಪಿಸಿ, ''ಮನಸ್ಸು ಮಾಡಿದರೆ ಏನನ್ನಾದರೂ ಸಾಧಿಸಬಹುದು'' ಎಂಬ ತಾತ್ವಿಕ ನೆಲೆಗಟ್ಟಿನ ಮೇಲೆಯೇ ಹೆಚ್ಚಿನ ಪ್ರಬಂಧಗಳು ಬರೆದಿದ್ದಾರೆ. ಗಾಂಭೀರ್ಯ ಹಾಸ್ಯ, ಹರಟೆ, ಚಿಂತನೆ ಈ ಎಲ್ಲ ಗುಣಗಳನ್ನು ಒಳಗೊಂಡು, ಆಡು ಭಾಷೆಯ ಸೊಗಡಿನಿಂದ ಈ ಸಂಕಲನ ಇನ್ನಷ್ಟು ಕಳೆಗೊಂಡಿವೆ. ಪಾಟೀಲರ ಸಾಹಿತಿಗಳ ಸಹವಾಸದಲ್ಲಿ ನೊಂದರೂ ಕೂಡ ಆಸಕ್ತಿಯಿಂದ ಈ ಕ್ಷೇತ್ರದಲ್ಲಿ ದುಡಿಯುತ್ತಿರುವುದು ಹೆಮ್ಮೆಯ ವಿಷಯವಾಗಿದೆ.

ಸಮರ್ಥ ಕವಿಯಾದ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಅತ್ಯುತ್ತಮ ಗದ್ಯವನ್ನು ನೀಡಬಲ್ಲರು. ತಮ್ಮ ಮೂವತ್ತು ವರ್ಷದ ಅನುಭವವನ್ನು ಗದ್ಯರೂಪದಲ್ಲಿ ಧಾರೆ ಎರೆದಿದ್ದಾರೆ. ಹನ್ನೆರಡು ಪ್ರಬಂಧಗಳು ಅಚ್ಚುಕಟ್ಟಾಗಿ ಮುದ್ರಣಗೊಂಡು, ಆಕರ್ಷಕ ತಲೆಬರಹ ಧರಿಸಿ ಅತ್ಯಾಕರ್ಷಕವಾಗಿ ಮೂಡಿ ಬಂದಿರುವ ಈ ಸಂಕಲನ ಸಂಗ್ರಹ ಯೋಗ್ಯ ಕೃತಿಯಾಗಿದೆ.

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಪ್ರವೃತ್ತಿಯಿಂದ ಕವಿಗಳು, ಯಾವುದೇ ಪಂಥಕ್ಕೂ ಒಗ್ಗದೆ ನಿರ್ಭೀತವಾಗಿ ಬರೆಯಬಲ್ಲರು. ಅವರ ಲೇಖನಿ ಕಾವ್ಯದಲ್ಲಿ ಮಾತ್ರವೇಕೆ, ಗದ್ಯದಲ್ಲೂ ತೀವ್ರವಾಗಿ, ನಿಖರವಾಗಿ, ಸಶಕ್ತವಾಗಿ ಓಡಬಲ್ಲದು ಎಂಬುದಕ್ಕೆ ಈ ಪ್ರಬಂಧ ಪುಸ್ತಕವೇ ಸಾಕ್ಷಿ.

ಅವರ ಬರವಣಿಗೆಯಲ್ಲಿ ವ್ಯಂಗ್ಯವಿದೆ, ಕಟೋಕ್ತಿ ಇದೆ, ಹಾಸ್ಯವಿದೆ, ಜನ ಮನಮಾನವನ್ನು ನವಿರಾಗಿ ತಟಬಲ್ಲ ಶಕ್ತಿ ಇದೆ. ಅವರ ಸಹೃದಯತೆ, ಅವರನ್ನು ನಿಕಟದಿಂದ ಬಲ್ಲವರಿಗೆಲ್ಲ ಗೊತ್ತು. ಸೃಜನಶೀಲ ಬರವಣಿಗೆಯಲ್ಲಿ ತನ್ನದೇ ಛಾಪನ್ನು ಮೂಡಿಸಿಕೊಂಡು ಬಂದ ಸಿದ್ಧರಾಮರು ತಮ್ಮ ಬಾಲ್ಯದ, ತಮ್ಮ ಹಳ್ಳಿಯ ಅನುಭವವನ್ನೇ ಮೂಲ ದ್ರವ್ಯವನ್ನಾಗಿ ಸಾಹಿತ್ಯಕ್ಕೆ ಗ್ರಾಸವಾಗಿಸುತ್ತಾರೆ. ತಮ್ಮ ಅನುಭವದ ಗುಣವನ್ನು ಇನ್ನಷ್ಟು ಅಗೆತಕ್ಕೆ, ವ್ಯವಸಾಯಕ್ಕೆ ಆಸ್ಪದವಿದೆ ಎನ್ನುವುದರಲ್ಲಿ ಪಾಟೀಲರ ಭವಿಷ್ಯವಿದೆ. ಅವರು ಇದನ್ನು ಸಾಧಿಸುವ ಭರವಸೆ ಇದೆ.

ಇವರ ಪ್ರಬಂಧ ಸಂಕಲನಗಳಲ್ಲಿ ಯಾವುದೇ ವಿಚಾರವನ್ನು ಮಂಡಿಸುತ್ತಾ, ಕೊನೆಗೆ ಒಂದು ತತ್ವ ನೀತಿಯನ್ನು ಹೇಳುವುದು ಇವರ ಪ್ರಬಂಧದ ವೈಶಿಷ್ಟ್ಯವಾಗಿದೆ.

## 4. ತತ್ವಪದ ಸಾಹಿತ್ಯ :

12ನೇ ಶತಮಾನದ ಶರಣರ ವಚನ ಸಾಹಿತ್ಯ ಘಟ್ಟ ಮುಗಿದ ಮೇಲೆ, 15ನೇಯ ಶತಮಾನದಲ್ಲಿ ಶೈವ ವೀರಶೈವರಿಂದ ತತ್ವಪದಗಳು, ದಾಸರ ಕೀರ್ತನೆಗಳ ಜತೆ ಜತೆಗೆಯೇ ಹುಟ್ಟಿ, ಮುಂದೆ ಎಲ್ಲಾ ಜಾತಿ ಜನಾಂಗದವರಿಂದಲೂ ಬರೆಯಲ್ಪಟ್ಟು, ಎಲ್ಲವು ವಿಕಾಸವಾದವು. ಆದ್ದರಿಂದ 14-15 ನೇಯ ಶತಮಾನವನ್ನು ತತ್ವಪದಗಳ ಪ್ರಾರಂಭವಾದ ಕಾಲವೆಂದು ಹೇಳಬಹುದು.

ಮುಪ್ಪಿನ ಷಡಕ್ಷರಿಗಳ ಸುಬೋಧಸಾರ, ಕಲಬುರ್ಗಿಯ ಕಡಕೋಳ ಮಡಿವಾಳಪ್ಪನವರ ತತ್ವಪದಗಳೂ ಹಾಗೂ ಅವರ ಶಿಷ್ಯಪರಂಪರೆಯ ಹಾಡುಗಳು, ತಳೇವಾಡಿಯ ನಬೀಸಾಬಿಯ ಹಾಡುಗಳು, ನಿತ್ಯಾತ್ಮ ಎಂಬ ಅಂಕಿತಗಳಲ್ಲಿರುವ ಬಳ್ಳಾರಿಯ ಸದಾನಂದ ಯೋಗಿಗಳ ಹಾಡುಗಳು, ರಾಯಚೂರಿನ ಹಸನ್ ಸಾಹೇಬರ ಹಾಡುಗಳು, ಗೋವಿಂದ ಭಟ್ಟರ ಹಾಗೂ ಶಿಶುನಾಳ ಶರೀಫನ ಹಾಡುಗಳು, ಇತ್ಯಾದಿ ಕನ್ನಡ ಜನಸಾಮಾನ್ಯರಲ್ಲಿ ಬೆಳೆದು ಬಂದ ಹಾಡುಗಳು ತತ್ವಪದಗಳೆಂದೇ ಬೆಳೆದುಬಂದಿವೆ.

ಗೊಂದಲಿಗರು ಸಹ ತಮ್ಮ ಗೊಂದಲ ಹೇಳುವಾಗ ಮಧ್ಯದಲ್ಲಿ ಈ ತತ್ವಪದಗಳನ್ನು ಹಾಡುತ್ತಾರೆ. ಇತ್ತೀಚೆಗೆ ಭಜನಾ ಮಂಡಳಿಯವರ ಕೈಯಿಂದ ವೃತ್ತಿನಿರತ ಮಹಾನ್ ಗಾಯಕರು ಇವುಗಳನ್ನು ಕಿತ್ತುಕೊಂಡು ತಾವೂ ಹಾಡಿ ಬಿಟ್ಟರು. ಒಟ್ಟಾರೆ ಹಾಡಬಲ್ಲವರೆಲ್ಲರನ್ನು ಸೆರೆಹಿಡಿದು ಸೂರೆಗೊಂಡ ಹಾಡುಗಳೆಂದರೆ ಈ ತತ್ವಪದಗಳೇ ಈ ವಾದ್ಯಮೇಳದವರು ಹಳೆಯ ದಮಡಿ, ತಾಳ, ಸಂಬಾಳಗಳೊಂದಿಗೆ ಅತ್ಯಂತ ಆಧುನಿಕ ವಾದ್ಯಗಳನ್ನು ಬಳಸಿಕೊಂಡರು. ಆದರೂ, ಉತ್ತರ ಕರ್ನಾಟಕದ ಭಜನಾ ಮಂಡಳಿಯ ಸೊಗಸಾಗಲಿ, ಅಲ್ಲಿ ಸಿಗಲು ಸಾದ್ಯವೇ ಇಲ್ಲ. ಕಂಬಿಯವರು ಸಾರೋ ಅಯ್ಯನವರು, ಕಲಪಾಲ ಮೇಳದವರು ಬಹುರೂಪಿಗಳು ಈ ತತ್ವಪದಗಳನ್ನು ಹಾಡಿದ್ದಾರೆ.

ಸ್ವರವಚನಗಳಂತೆ ದೇವರ ನಾಮ, ಕೀರ್ತನೆಗಳಂತೆ ಪಲ್ಲವಿ, ನುಡಿ/ ಚರಣ ಅಂಕಿತಗಳೆಲ್ಲವೂ ಇವಕ್ಕಿವೆ. ಅವು ಶಿಷ್ಟವಾದರೆ, ಇವು ಪರಿಶಿಷ್ಟ. ಅವು ಮಾರ್ಗವಾದರೆ , ಇವು ದೇಶೀ . ಸರ್ವಧರ್ಮಗಳ ಸಾರವೇ ಈ ತತ್ವಪದಗಳ ವಸ್ತು. ಹೀಗಾಗಿ ಇದು ನಿಜವಾದ ಮಾನವ ಧರ್ಮ. ಜನರದ್ದೆ ಭಾಷೆ, ಜನರದ್ದೇ ಹಾಡು, ಜನರೇ ಹಾಡುವವರು, ಜನರೆ ಕೇಳುವವರು, ಜನರೇ ಪ್ರಸಾರ ಮಾಡುವವರು, ಜನರೇ ಬೆಳೆದವರು ಇದು ಜನಪದದ ಫಲವಾಗಿದೆ.

ಪೋಲೀಸ ಪಾಟೀಲರು ಕಡಕೋಳ ಮಡಿವಾಳಪ್ಪನವರ ಊರಿನ ಹತ್ತಿರದವರಾದ್ದರಿಂದ ಅವರ ಹಾಡಿನ ಪ್ರಭಾವ ಇವರ ಮೇಲಾಗಿದೆ. ಅನೇಕ ಹಾಡುಗಳು ಅವರ ಧಾಟಿಯಲ್ಲಿವೆ. ಪಾಟೀಲರು ತತ್ವಪದಗಳನ್ನು ಸ್ವಂತ ರಚಿಸಿದ್ದಾರೆ.

ತತ್ವಪದಗಳು ಆದರದಿಂದ ಓದಿದಾಗ, ಅವರು ಸಾಧಿಸಿಕೊಂಡಿರುವ ಲಯದ ಸಹಜತೆ ಆಶ್ಚರ್ಯವನ್ನುಂಟು ಮಾಡುತ್ತದೆ. ಇಲ್ಲಿನ ತತ್ವಪದಗಳಲ್ಲಿ ಹೊಸರೀತಿಯನ್ನು ಅನುಸರಿಸಿದ್ದಾರೆ. ಇಲ್ಲಿ ಸಮಕಾಲೀನ ಬದುಕನ್ನು ಬದುಕಿನ ಸಮಸ್ಯೆಗಳನ್ನು ತಂದಿರುವ ರೀತಿ ಅನನ್ಯವಾದುದು.

'ಅನುಭಾವ'ವೆಂಬುವುದು 'ಅಂತರಂಗದ ರತ್ನ' ಎಂದ ತಿಳಿದವರು ಹೇಳಿದ್ದಾರೆ. ಪ್ರತಿಯೊಬ್ಬರಿಗೂ ತನ್ನದೇ ಆದ ಅನುಭವ, ಅನಿಸಿಕೆಗಳು ಇರುತ್ತವೆ. ಹಲವಾರು ತತ್ವಗೋಚರಿಸುತ್ತವೆ. ಹಿಂದಿನವರ ಅನುಭವವೇ ಶ್ರೇಷ್ಠ ಈಗಿನವರ ಅನುಭವ ಕೀಳು ಎಂದು ಹೇಳುವುದಕ್ಕೆ ಆಗುವುದಿಲ್ಲ. ಅನುಭವ ಯಾರದಿದ್ದರೂ, ಅದು ಅನುಭವವೇ. ಬೆಂಕಿ ಯಾರ ಮನೆಯಲಿದ್ದರೂ, ಅದು ಬೆಂಕಿಯೇ. ಒಬ್ಬೊಬ್ಬರ ಮನೆಯ ಬೆಂಕಿಯ ಗುಣಧರ್ಮ. ಒಂದೇಯಾಗಿರುತ್ತದೆ. ತತ್ವಪದಗಳು ಮುಂದಿನವರಿಗೆ ದಾರಿದೀಪಗಳಾಗುವಂತಿದ್ದರೆ ಅವುಗಳನ್ನು ಸಂಗ್ರಹಿಸುವುದು, ಪಾಲಿಸುವುದು ಅತ್ಯವಶ್ಯಕ. ಅನುಭವ ಒಬ್ಬನಲ್ಲೇ ಉಳಿದು ಗಾಳಿಯಲ್ಲಿ ಹಾಳಾಗಿ ಹೋಗಬಾರದು. ಒಳ್ಳೇ ವಿಚಾರ, ತಾನು ಪಡೆದ 'ಶ್ರೇಷ್ಠ ಅನುಭವಗಳನ್ನು ಬರೆಯುವುದು ಬಹಳ ಮುಖ್ಯವಾಗಿದೆ. ''ಬುಡಮೇಲಾದ ಗಿಡ'' ಸಂಕಲನವನ್ನು ಪಾಟಲೀಲರು ಹೊರ ತಂದಿದ್ದಾರೆ.

**ಬುಡಮೇಲಾದ ಗಿಡ** :

ಬುಡಮೇಲಾದ ಕೃತಿಯಲ್ಲಿ ಐವತ್ತೊಂದು ತತ್ವಪದಗಳು ಸೇರಿಕೊಂಡಿವೆ. ಇವು ಒಮ್ಮೆಲೆ ಬರೆದವುಗಳಲ್ಲ. ಬಹಳ ದಿನಗಳಿಂದ ಬರೆಯುತ್ತ ಬಂದುವುಗಳಾಗಿವೆ. ಇದರಲ್ಲಿ ಅನೇಕ ಹಾಡುಗಳು ಸಿದ್ಧರಾಮ ಪೋಲೀಸ್ ಪಾಟೀಲರ ಊರಿನ ಕಡೆ ಜನರು ಭಜನೆಯಲ್ಲಿ ಹಾಡುತ್ತಾರೆ. ಕೆಲವೊಂದು ಹಾಡು ಭಜನೆಗಾಗಿಯೇ ಬರೆದಿದ್ದಾರೆ. ತತ್ವಪದಗಳನ್ನು ಓದುವವರಾರು? ಎಂದು ತಿಳಿದು ಅವನ್ನು ಹಾಗೇ ಇಟ್ಟಿದ್ದರು. ಆದರೆ ಇತ್ತಿತ್ತಲಾಗಿ ತತ್ವಪದಗಳಿಗೂ ಒಂದು ಬೆಲೆ ಬಂದು, ಉತ್ತಮ ನೆಲೆ ಕಾಣುತ್ತಿರುವುದು ಸಂತೋಷದ ವಿಚಾರವಾಗಿದೆ.

ಇದರಲ್ಲಿಯ ಕೆಲವೊಂದು ಹಾಡುಗಳು ಈಗಾಗಲೇ ಅಚ್ಚಾದ ಕವನ ಸಂಕಲನದಲ್ಲಿ ಪ್ರಕಟಗೊಂಡಿವೆ. ಇದರಲ್ಲಿ ಮೊದಲಿಗೆ ಪ್ರಾರ್ಥನೆ, ಆತ್ಮ ನಿವೇದನೆ, ಶರಣರ, ಸತ್ಪುರುಷರ ಬಗ್ಗೆ ಬರೆದ ಹಾಡುಗಳಿವೆ. ಅಲ್ಲದೆ ವಿಡಂಬನೆ, ತತ್ವಪದ, ಕರ್ಪುರ, ಕಡ್ಡಿ ಬತ್ತಿ, ಮಂಗಳಾರುತಿ ಪದಗಳೂ ಇವೆ. ಇವೆಲ್ಲವನ್ನು ಅನುಕ್ರಮವಾಗಿ ಜೋಡಿಸಿದ್ದಾರೆ. ಅನೇಕ ಧಾಟಿಗಳನ್ನು ಬಳಸಿದ್ದಾರೆ. ಅನೇಕ ಹಾಡುಗಳಲ್ಲಿ ಮಾಡರ್ನ ಯುಗದ ಹೊಸ ಹೊಸ ಪ್ರತೀಕ ದೃಷ್ಟಾಂತಗಳನ್ನು ಅಳವಡಿಸಿದ್ದಾರೆ. ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಈ ತತ್ವ ಪದಗಳು 'ಕಾಡಸಿದ್ಧ' ಅಂಕಿತವನ್ನೊಳಗೊಂಡಿವೆ. ಈ 'ಬುಡಮೇಲಾದ ಗಿಡ' ದ ಒಂದು ವಿಶೇಷಾಂಶವೆಂದರೆ ಏಕತಾನತೆಯಿಂದ ದೂರವಾಗುವ ಅದರ ಲಯದ ಸಹಜತೆ ಇಲ್ಲಿ ಕೆಲವು ಸುಪ್ರಭಾತಗಳಿವೆ. ಕೆಲವು ಶರಣರ ವ್ಯಕ್ತಿ ಚಿತ್ರಣಗಳಿವೆ ವಿಡಂಬನೆಗಳೂ ಇವೆ. ವುತ್ತೆ ಭಜನೆಯ ಹಾಡುಗಳೂ ಇವೆ. ಉದಾಹರಣೆಗೆ ಅಚಲೇರಿ ಮುತ್ಯಾನನ್ನೆ ನೋಡಬಹುದು.

" ಕೆಂಪು ರುಮಾಲು ಮತ್ತ ಮೈಯಾಗ ಶಾಲು ಹಸಿರು
ಹೊಂಟಾರ ನೊಡ್ರಿ ನಮ್ಮ ಸಿದ್ಧರಾಮ ಶ್ರೀ ಗುರು"[21]

ಎನ್ನುತ್ತ ನಮ್ಮ ಕಣ್ಣ ಮುಂದೆ ಮುತ್ಯಾರ ಚಿತ್ರ ಮೂಡುವಂತೆ ಮಾಡಿದ್ದಾರೆ.

" ಕಾಮಧೇನು, ಕಲ್ಪವೃಕ್ಷ ಇವರೇ ಆಗಿಹರು
ಮುಟ್ಟಿದ್ದೆಲ್ಲಾ ಬಂಗಾರ, ಪರುಷಮಣಿ ಇವರು
ಹೆಚ್ಚೇನು ಹೇಳಲಿ, ಇವರು ಮಾತಾಡ್ವ ದೇವರು "[22]

ಅಚಲೇರಿ ಮುತ್ಯಾರ ವ್ಯಕ್ತಿತ್ವದ ಮಹಿಮೆಯನ್ನು ಮನಗಾಣಿಸುವ ಅಭಿವ್ಯಕ್ತಿಸುವ ರೀತಿ ಮೇಲಿನ ತತ್ವಪದವಾಗಿದೆ. ಇಂಥ ವ್ಯಕ್ತಿ ಚಿತ್ರಗಳು 'ಯಲ್ಲಾಲಿಂಗ ಅಜ್ಜ' ; 'ಮಡಿವಾಳ ಯೋಗಿ,' ಮೊದಲಾದ ಹಾಡುಗಳಲ್ಲೂ ಇದ್ದು, ಕಾವ್ಯವಲಯವನ್ನು ಪ್ರವೇಶಿಸುತ್ತವೆ.

'ಲುಚ್ಚಾ ಸಾಧು !' 'ಶಿವರಾತ್ರಿ', ಯಂಥ ರಚನೆಯಂಥ ರಚನೆಗಳಲ್ಲಿ ಕಂಡುಬರುವ ವಿಡಂಬನೆಯ ರೀತಿಯೇ ಬೇರೆಯಾಗಿದೆ. ಇದು ಬೈಗುಳವಾಗುವುದಕ್ಕಿಂತ ಹೆಚ್ಚಾಗಿ ಸಚ್ಚಾರಿತ್ರ್ಯದ ಮೇಲೆ ಒತ್ತು ಕೊಡುವ ರೀತಿಯದಾಗಿದೆ.

---

21. ಬುಡಮೇಲಾದ ಗಿಡ- ಅಚಲೇರಿ ಮುತ್ಯಾ - ಪುಟ. ಸಂ. 15
22. ಬುಡಮೇಲಾದ ಗಿಡ- ಅಚಲೇರಿ ಮುತ್ಯಾ - ಪುಟ. ಸಂ. 15

ಇಲ್ಲಿನ ತತ್ವ ಪದಗಳಲ್ಲಿ ಹೊಸ ರೀತಿಯೊಂದನ್ನು ಗಮನಿಸಬಹುದು. 'ಕಲ್ಲು ಸಕ್ಕರೆ ಕೊಳ್ಳಿರೊ', ಎಂಬ ಧಾಟಿಯಂತೆ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ''ಕೊಳವೆ ಬಾವಿ ಕೊರೆಯಿರೋ ಸುಜ್ಞಾನಿಗಳ ಕೊಳವೆ ಬಾವಿಯ ಕೊರೆಯಿರೋ''[23] ಪಲ್ಲವಿಯನ್ನು ರಚಿಸಿದ್ದಾರೆ. ಈ ರೀತಿಯಲ್ಲಿ ಜ್ಞಾನದ ಅಂತರ್ಜಲದ ಪ್ರಾಪ್ತಿಗಾಗಿ ಪ್ರಯತ್ನಿಸಬೇಕೆನ್ನುತ್ತಾರೆ. ರಸ್ತೆ ಮಾಡಬೇಕು, ಜೀಪು, ವಿಮಾನ, ನರಯಂತ್ರ ಇಂಥ ರಚನೆಗಳು ಈ ರೀತಿಯಾಗಿವೆ.

ತತ್ವಾಚರಣೆ ವ್ಯಕ್ತಿತ್ವದ ಶುಭ್ರತೆಗೆ ಹಾಗೂ ಬೆಳವಣಿಗೆಗೆ ಕಾರಣವಾಗುವಂತೆ, ಕಾವ್ಯ ವಲಯವನ್ನು ಪ್ರವೇಶಿಸಬೇಕಿದ್ದರೆ ಅಂಥ ಬೆಳವಣಿಗೆ ಬೇಕಾಗುತ್ತದೆ. ಅದು ಅಭಿವ್ಯಕ್ತಿಗೆ ಹಾಗೂ ಅನುಭವವಲಯಕ್ಕೆ ಸವಾಲಾಗುವ ಕ್ಷೇತ್ರ ಅಂಥ ಸವಾಲನ್ನು ಎದುರಿಸಿದಾಗ ಮಾತ್ರ ಸಿದ್ಧಿ ಸಾಧ್ಯವಾದೀತು. ಇಲ್ಲದಿದ್ದಲ್ಲಿ ತತ್ವಾಲೋಚನೆ ಮಿತಿಗಳಿಂದ ಬಾಧಿತವಾಗಿ ಬಿಡುತ್ತದೆ. ಅಂಥ ಮಿತಿಗಳಿಂದ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಕೃತಿ ಹೊರಬಂದಿದೆ.

ಸಿದ್ಧರಾಮ ಪೋಲೀಸ ಪಾಟೀಲರು ವೃತ್ತಿಯಿಂದ ಇಂಜೀನಿಯರರಾದರೂ ಇಂತಹ ತತ್ವ ಪದಗಳನ್ನು ಬರೆದಿರುವುದು, ಅವರಿಗೆ ಹಿಂದಿನಿಂದ ಬಂದ ಸಂಸ್ಕಾರದ ಫಲವಾಗಿದೆ. ಜನಸಾಮಾನ್ಯರಿಗೆ ತಿಳಿಯುವ ಆಡು ಭಾಷೆಯಲ್ಲಿರುವ ಅವರ ತತ್ವ ಪದಗಳಲ್ಲಿ ಅವರ ಸ್ವಂತ ಅನುಭವವಿದೆ. ತಮ್ಮ ಕ್ಷೇತ್ರಕ್ಕೆ ಸಂಬಂಧ ಪಟ್ಟ ಪ್ರತಿಮೆ, ಪ್ರತೀಕಗಳನ್ನು ಬಳಸಿಕೊಂಡಿದ್ದಾರೆ. ಪ್ರಾಚೀನ ಕಾಲದಿಂದಲು ನಮ್ಮಲ್ಲಿ ಬೆಳೆದುಬಂದ ತತ್ವ ಪದ ನಶಿಸಿ ಹೋಗುತ್ತಿದೆ. ಇಂಥ ಸಂದರ್ಭದಲ್ಲಿ ಸಿದ್ಧರಾಮ ಪೋಲೀಸ್ ಪಾಟೀಲರ 'ಬುಡಮೇಲಾದ ಗಿಡ' ತತ್ವಪದ ಕುರಿತಂತೆ, ಜನ ಸಾಮಾನ್ಯರಲ್ಲಿ ಜಾಗ್ರತಿ ಮೂಡಿಸಲು ಸಹಾಯವಾಗಿದೆ.

12ನೇ ಶತಮಾನದ ವಚನಕಾರರಂತೆ ಹಿಂದೆ ಆಗಿ ಹೊದ ಹಿರಿಯ ತತ್ವ ಪದಕಾರರಂತೆ, ಸಿದ್ದರಾಮು ಪೋಲೀಸ ಪಾಟೀಲರು ತಮ್ಮ ತತ್ವ ಪದಗಳಿಗೆ ಕಾಡಸಿದ್ದ ಎಂಬ ತಮ್ಮದೇ ಆದ ಅಂಕಿತವನ್ನು ಇಟ್ಟುಕೊಂಡಿದ್ದಾರೆ. ದಾಸರ ಕೀರ್ತನೆಗಳಂತೆ, ಇಲ್ಲಿ ಮೂಡಿಬಂದ ಮನಬೆಳಗುವ ದೀಪ ನರಯಂತ್ರ, ಕೊಳವೆ ಬಾವಿ, ಹಾಳುಗೆಡವಿದರು. ಹೊಸಮನೆ ಮುಂತಾದ ತತ್ವಪದಗಳು ತುಂಬ ಪರಿಣಾಮಕಾರಿಗಳಾದವುಗಳಾಗಿವೆ. ಜ್ಞಾನ ಪ್ರಾಪ್ತಿಗಾಗಿ, ಮೋಕ್ಷಕ್ಕಾಗಿ ಈ ಬದುಕಿನ

---

23. ಬುಡಮೇಲಾದ ಗಿಡ-ಕೊಳವೆ ಬಾವಿ - ಪುಟ. ಸಂ. 60

ಜಂಜಾಟದಿಂದ ಬಿಡುಗಡೆಗಾಗಿ, ಮನುಷ್ಯ ಮಾಡಬೇಕಾದ ಪ್ರಯತ್ನಗಳನ್ನು ಈ ತತ್ವಪದಗಳು ಮೂಡಿಸುತ್ತವೆ. ಒಬ್ಬ ಸೃಜನಶೀಲ ಚಿಂತಕನಿಗೆ ಬರಹಗಾರನಿಗೆ ಸಾಹಿತ್ಯದ ಯಾವ ಕ್ಷೇತ್ರದಲ್ಲಾದರೂ ಕೃಷಿಗೈಯಬಲ್ಲ ಸಾಮರ್ಥ್ಯ ಇರುತ್ತದೆ.

## 5. ಚುಟುಕು ಸಾಹಿತ್ಯ :

ಬದುಕಿನ ಬದಲಾವಣೆಗೆ ತಕ್ಕಂತೆ ಎಲ್ಲವೂ ಬದಲಾಗುತ್ತದೆ. ನಾಗರಿಕತೆಯ ಮಿಂಚು ವೇಗದಲ್ಲಿ ಸಾಂಸ್ಕೃತಿಕ, ವೈಚಾರಿಕ, ವಿಧಾನಗಳು ಬದಲಾಗುವುದು ಸ್ವಾಭಾವಿಕವಾಗಿದೆ. ನಮ್ಮ ಬದಲಾದ ವಿಚಾರಧಾರೆಗೆ ಅನುಗುಣವಾಗಿ, ಅಭಿವ್ಯಕ್ತಿಯ ವಿಧಾನಗಳೂ ಬದಲಾಗುತ್ತ ಬಂದುದನ್ನು ಕಾಲ ಕಾಲಕ್ಕೆ ಗುರುತಿಸುತ್ತ ಬಂದಿದ್ದೇವೆ. ಅದರ ಪರಿಣಾಮವೇ ವೈವಿಧ್ಯಮಯ ಸಾಹಿತ್ಯಿಕ ರೂಪಗಳು ಈ ಮಾತು, ಕಲೆ, ಸಂಗೀತ, ಚಿತ್ರ ಎಲ್ಲದಕ್ಕೂ ಅನ್ವಯವಾಗುತ್ತದೆ.

ಮಹಾಕಾವ್ಯ ಖಂಡಕಾವ್ಯ, ಕಾದಂಬರಿ, ಕಥೆ, ಭಾವಗೀತೆ ಹೀಗೆ ಹಲವಾರು ಪ್ರಕಾರಗಳು ಹಳೆಯವಾಗಿವೆ. ಈಗ ವಿಸ್ತಾರವಾದುದನ್ನು ಬರೆಯಲು, ವ್ಯಾಪಕವಾದುದನ್ನು ಓದಲು ಯಾರಿಗೂ ಪುರಸೊತ್ತಿಲ್ಲ. ಅದಕ್ಕಾಗಿ ಕಿರಿದರಲ್ಲಿ ಪಿರಿದರ್ಥ ತುಂಬುವ ಜನಪದ ತ್ರಿಪದಿಗಳನ್ನು ಶ್ರಮ ಜೀವಿ ಗರತಿ ಹುಟ್ಟು ಹಾಕಿದಳು. ಆದ್ದರಿಂದ ನಮಗೆ ಸರ್ವಜ್ಞನೆ ಮೊದಲು ಶಿಷ್ಟ ಕವಿಯಾದ.

ಉಸಿರಾಡಲು ಪುರೊಸೊತ್ತಿಲ್ಲದ ಈ ಕಾಲದಲ್ಲಿ ಓದು ವುದಕ್ಕೆ ಬರುವವರು ಓದುವುದು ತೀರ ಕಡಿಮೆ ಅರ್ಥಕ್ಕೆ ಕಷ್ಟವಾದ ಮಹಾಕಾವ್ಯಗಳನ್ನು ಬಿಡಿ, ಸರಳವಾಗಿ ಓದಿಸಿಕೊಂಡು ಹೋಗುವ ಕಾದಂಬರಿಗೂ ಈ ಗ ಓದುಗರಿಲ್ಲ. ಅದಕ್ಕಾಗಿ ಗುಟುಕು ಕುಡಿದು, ಚುಟುಕು ಬರೆವ ಹವ್ಯಾಸ ಹೆಚ್ಚಾಗಿದೆ. ಓದುಗನು ಚಾಕಲೇಟಿನಂತೆ ಚೀಪಿ ಉಗುಳು ನುಂಗಿ ಹೊಟ್ಟೆ ತುಂಬಿಸಿಕೊಳ್ಳುವ ಒಣ ಸಾಹಸ ಮಾಡುತ್ತಾನೆ.

ಇದು ಚುಟುಕು ಕವಿಗಳ ಕಾಲ, ಎಲ್ಲೆಲ್ಲಿಯೂ ಚುಟುಕ ಚಟುವಟಿಕೆಗಳಿಗೆ ಚುಟುಕು ಗೋಷ್ಠಿ ಚುಟುಕು ಸಮ್ಮೇಳನ, ಚುಟುಕು ಪರಿಷತ್ತು, ಈಗ ಚುಟುಕು ಅಕಾಡೆಮಿಯ ಬೇಡಿಕೆಯೂ ಇದೆ. ಅದಕ್ಕಾಗಿ ಬಹಳಷ್ಟು ಜನ ಚುಟುಕು ಬ್ರಹ್ಮರಾಗಿಯೇ ಮಾತಾಡುತ್ತಾರೆ.

ಪರಿಣಾಮದಲ್ಲಿ ಒಳ್ಳೆಯ ಚುಟುಕು ಚೇಳಿನ ಕೊಂಡಿಯ ಕುಟುಕು! ಅದರಲ್ಲಿ ಅಭಿವ್ಯಕ್ತಿಯ ಸೊಗಸು, ಅನುಭವದ ಚಿಂತನೆ, ರಚನಾತ್ಮಕ ವಿಚಾರ ಏನೆಲ್ಲವೂ ಅದರಲ್ಲಿ ತುಂಬಿಕೊಂಡಿರಬೇಕು. ಈ ನಿಟ್ಟಿನಲ್ಲಿ ಬರೆವ, ಮೊದಲ ಬರೆಯುವಾಗ ಚಿಂತಿಸಿದವರೇ ಇಲ್ಲ. ತಮಗೆ ತಿಳಿದಂತೆ (ಇನ್ನೊಬ್ಬರಿಗೆ ತಿಳಿಯಲು, ಬಿಡಲಿ) ಬಂದ ಹಾಗೆ, ಅಂದ ಹಾಗೆ ಬರೆದು ಬಿಡುವವರೇ ಅಧಿಕ, ಹೀಗಾಗಿ ಯಾವುದೇ ಒಂದು ಸಾಹಿತ್ಯಿಕ ರೂಪ, ರೂಪಗೊಂಡು ಅಪರೂಪವಾಗುವ ಮೊದಲೇ ಅಪರೂಪಗೊಳ್ಳುವುದನ್ನೇ ಕಂಡಿದ್ದೇವೆ ಈಗ ಕನ್ನಡ ಚುಟುಕು ಸಾಹಿತ್ಯದ ಗತಿ ಇದಕ್ಕೆ ಭಿನ್ನವಾಗಿಲ್ಲ.

ಅಧ್ಯಯನ, ಅನುಭವ ಎರಡೂ ಇಲ್ಲದವರು, ಅನುಭವವಿದ್ದು ಭಾಷೆಯ ಮೇಲೆ ಹಿಡಿತ ಇಲ್ಲದವರು, ಇವೆಲ್ಲ ಇದ್ದೂ ಅಭಿವ್ಯಕ್ತಿಯ ತೂಕ ತಂತ್ರ ಅರಿಯದವರು, ಪ್ರಕಟಿಸಿ ಪುಸ್ತಕ ಮಾಡುವ ಒಂದೇ ಉದ್ದೇಶಕ್ಕೆ ಬರೆಯುವಂತಿದೆ. ಹೀಗಾಗಿ ಆಕೃತಿ ಕೆಟ್ಟ ಆಕೃತಿಯಾಗುವಲ್ಲಿ ಸಂದೇಹವಿಲ್ಲ.

ಹಾಸ್ಯವನ್ನೇ ಚುಟುಕಿನ ಉದ್ದೇಶವಾಗಿಟ್ಟುಕೊಂಡವರ ಚುಟುಕುಗಳಲ್ಲಿ ಅಪಹಾಸ್ಯವೇ ತುಂಬಿ, ಹಾಸ್ಯಾಸ್ಪದವಾದ ಸನ್ನಿವೇಶಗಳೇ ಅಧಿಕ ನೇರ ನೀತಿಯನ್ನೇ ಬಹಳಷ್ಟು ಚುಟುಕುಗಳ ವಿಷಯವಾಗಿಸಿಕೊಂಡಿದ್ದಾರೆ.

ಸಾಹಿತ್ಯರೂಪ ಎಷ್ಟೆಷ್ಟು ಸಣ್ಣದಾಗುತ್ತ ಹೋಗುತ್ತದೆಯೋ ಅಷ್ಟಷ್ಟು ಬರಹಗಾರನ ಹೊಣೆಗಾರಿಕೆ ಹೆಚ್ಚಾಗುತ್ತದೆ. ಈ ಚುಟುಕು ಬರಹ. ಬಹಳಷ್ಟು ಜನರಿಗೆ ಸಾದಿಸುವಂಥದಲ್ಲ. ಆದರೆ ಪಾಟೀಲರು ಸಾಧಿಸಿದ್ದಾರೆ.

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಆಸಕ್ತಿ ಪ್ರವೃತ್ತಿ ಸಾಹಿತ್ಯಿಕ. ಆದರೆ ಅವರು ವೃತ್ತಿಯಿಂದ ಎಂಜಿನೀಯರ. ಸುಸಂಸ್ಕೃತ ದೃಷ್ಟಿಕೋನದ ಅವರಿಗೆ ಸಮಾಜದ ಅಂಕು ಡೊಂಕುಗಳನ್ನು ಸಹಿಸಿಕೊಳ್ಳಲಾಗದೆ ಶಬ್ದದಲ್ಲಿ ಹೊರ ಹಾಕುತ್ತಾರೆ. ಯಾವ ಹವ್ಯಾಸವೂ ಇಲ್ಲದ ಇವರು ಏನಾದರೂ ಬರೆಯಬೇಕು ಎನ್ನುವ ಚಟ, ಹಟ! ವೃತ್ತಿಗನುಗುಣವಾಗಿ ಓದು ಕಡಿಮೆ ಎನ್ನುವುದನ್ನು ಪಾಟೀಲರೂ ಒತ್ತಿಕೊಳ್ಳುತ್ತಾರೆ. ವಿದ್ಯಾರ್ಥಿ ದೆಸೆಯಿಂದಲೂ ಸಾಹಿತ್ಯದ ಅಭಿರುಚಿ ಅವರನ್ನು ಬಿಟ್ಟಿಲ್ಲ. ಅವರು ಒಲವು ವಿಚಾರಗಳಿಗೆ ಲೋಕದ ಅನುಭವವೇ ಬೆನ್ನೆಲುಬು. ಅದರಿಂದಾಗಿ ಕವನ, ವಚನ, ವ್ಯಕ್ತಿ ಚಿತ್ರ, ಲಘು ಪ್ರಬಂಧ, ಸಂಪಾದನೆ, ತತ್ವಪದ ಹೀಗೆ ವಿವಿಧ ಸಾಹಿತ್ಯಿಕ ರೂಪದಲ್ಲಿ ಸಾಕಷ್ಟು ಕೃಷಿ ಮಾಡಿದ್ದಾರೆ. ಸ್ವಾನುಭವವನ್ನು ಸ್ವಸುಖಕ್ಕೆ ಬಳಸಿಕೊಂಡಿದ್ದಾರೆ. ಇವರ ಕೃತಿಗಳ ಹೆಸರುಗಳೇ ಇವರ ಹಾಸ್ಯ ಪ್ರವೃತಿಯನ್ನು ಎತ್ತಿ ಹೇಳುತ್ತವೆ. ಹಾಸ್ಯದ ಜೊತೆಗೆ ಕಟು ಸತ್ಯಕ್ಕೂ ಕನ್ನಡ ಹಿಡಿಯುವ ನಿಷ್ಠುರತೆ ಪಾಟೀಲರದು.

ಇವರ ಇನ್ನೊಂದು ವೈಶಿಷ್ಟ್ಯವೆಂದರೆ ಜನಪದರ ಆಡು ಮಾತಿನ ಬಳಕೆ. ಹೈದ್ರಾಬಾದ ಕರ್ನಾಟಕದ ಭಾಷಾ ಸ್ವರೂಪ ತಿಳಿಯ ಬಯಸುವವರು, ಅವರ ಕೃತಿಗಳನ್ನು ಪರಿಶೀಲಿಸ ಬಹುದಾಗಿದೆ. ಈ ಭಾಗದ ಶಬ್ದ ಸಂಸ್ಕೃತಿಯನ್ನು ಸ್ಪಷ್ಟವಾಗಿ ತೆರೆದು ತೋರಿಸುತ್ತಾರೆ.

**ಕವಣೆಗಲ್ಲು :**

ಶ್ರೀ ಪೋಲೀಸ ಪಾಟೀಲರು ಶುದ್ಧಾಂತರಂಗದ ಜೀವನಾನುಭವಿಗಳು ಒಂದು ದೃಷ್ಟಿಯಿಂದ ಮುಗ್ಧರೂ ಸಮಾಜದ ಆಗು ಹೋಗುಗಳನ್ನು ಕಂಡುಕೆಂಡವಾದವರು.

**'' ಕಂಡಿದ್ದು ಹೇಳಿದರೆ**
**ಕುಂಡಿ ಮೇಲೊದೆಯುವವರು**
**ಕಂಡಾಬಟ್ಟೆ ಹೊಗಳಿದರೆ**
**ಉಂಡು ಹೋಗೆನ್ನುವರು**
**ಈ ತತ್ವ ತಿಳಿದವ ಜಾಣ**
**ಗಳಿಸುವವನು ಹಣ**
**ಇದ್ದದ್ದು ಹೇಳಿದರೆ**
**ಆಗುವನು ಹರಕೆಯ ಕೋಣ ॥[23]**

ಇಂದಿನ ಸಮಾಜದ ಧೋರಣೆ, ಜನಮನದ ಇಂಗಿತ ಎರಡೂ ಇದರಲ್ಲಿ ವ್ಯಕ್ತವಾಗಿದೆ. ಈ ಸಮಾಜದಲ್ಲಿ ಸುಳ್ಳು ಹೇಳಿಯೇ ಒಳ್ಳೆಯರಾಗುತ್ತಿದ್ದಾರೆ. ಇದ್ದದ್ದನ್ನು ಹೇಳಿದರೆ ಅವರ ಮೇಲೆ ಕೆಂಡ ಕಾರುತ್ತಾರೆ. ಸಾವು ಕೂಡಾ ಸಂಭವಿಸಬಹುದು.

ಶ್ರೀ ಪೋಲೀಸ ಪಾಟೀಲರ ದೃಷ್ಟಿಯಲ್ಲಿ ಚುಟುಕು 'ಗುಲಾಬಿ ಜಾಮೂನು', 'ಆಲದ ಬೀಜ' ಎನ್ನುವ ಮಾತುಗಳಲ್ಲಿ ಚುಟುಕಿನ ಸುಂದರ ಕಲ್ಪನೆ ಸ್ಪಷ್ಟವಾಗಿದೆ. ಅದನ್ನು ಚೂಪಾದ ಬಾಣಕ್ಕೂ ಉಪಕ್ರಮಿಸಿದ್ದಾರೆ.

ಅವರ ನೇರ ನುಡಿ, ಬಹಳ ಕಡೆ ಉಪದೇಶವೋ, ಟೀಕೆಯೋ ಅನ್ನಿಸುವಂತಿದ್ದರೂ, ಮಾನವ ಸ್ವಭಾವಕ್ಕೆ ಕನ್ನಡಿ ಹಿಡಿಯುತ್ತವೆ.

**'' ರೊಕ್ಕ ಕೊಟ್ಟರೆ ಕೊಡುವ ಪ್ರಶಸ್ತಿಗಳು**
**ಬಿಕ್ಷೆ ಬೇಡುವವರಿಂದ ಇಸಗೊಂಡ ಚಿಲ್ಲರೆಗಳು ! ''[24]**

ಮೊದಲಾದ ಚುಟುಕುಗಳಲ್ಲಿ ಅವರ ಬದುಕನ್ನು ಕುರಿತು ಜಿಜ್ಞಾಸೆ ಎದ್ದು ಕಾಣುತ್ತದೆ. ಪ್ರಮುಖವಾಗಿ ಇವರ ವಚನಾಧ್ಯಯನದ ಪ್ರಭಾವಕ್ಕೆ ಒಳಗಾದುದನ್ನು ಗುರುತಿಸಬಹುದಾಗಿದೆ.

---

23. ಕವಣೆಗಲ್ಲು-ಸಾಮಾಜಿಕ ನೀತಿಯಲ್ಲಿ -ಕಂಡದ್ದು ಹೇಳಿದರೆ - 30, ಪು. ಸಂ. 44
24. ಕವಣೆಗಲ್ಲು-ಸಾಮಾಜಿಕ ನೀತಿಯಲ್ಲಿ - ಪ್ರಶಸ್ತಿ - 31, ಪು. ಸಂ. 45.

ಇತ್ತೀಚೆಗೆ ಚುಟುಕುಗಳ ಹಾವಳಿ ಹೆಚ್ಚಾಗಿ, ಎಲ್ಲಿ ನೋಡಿದರೆ ಅಲ್ಲಿ ಅದರದೇ ಕಾರುಬಾರು ನಡೆದಿದೆ. ಹೀಗಾಗಿ ಪಾಟೀಲರಿಗೂ ಅದರ ಪ್ರಭಾವ ಬೀರಿತೆಂದೇ ಹೇಳಬೇಕು. 'ಕಾಲಕ್ಕೆ ತಕ್ಕಂತೆ ನಡೆಯಬೇಕು; ತಾಳಕ್ಕೆ ತಕ್ಕಂತೆ ಕುಣಿಯಬೇಕು' ಎಂಬ ಮಾತಿನಂತೆ ಪಾಟೀಲರು ಚುಟುಕುಗಳನ್ನು ಬರೆಯಲಾರಂಭಿಸಿದರು, ಏಕೆಂದರೆ ದೂರದರ್ಶನ, ಆಕಾಶವಾಣಿ, ಸಭೆ ಸಮಾರಂಭಗಳಲ್ಲಿ ಚುಟುಕುಗಳಿಗೆ ಹೆಚ್ಚಿನ ಜನ ಮಾರು ಹೋಗತೊಡಗಿದರು. ಅವುಗಳಿಗೆ ಪ್ರಾಶಸ್ತ್ಯ ಹೆಚ್ಚಿತು. ಪಾಟೀಲರಿಗೆ ಈ ಚುಟುಕುಗಳನ್ನು ಬರೆಯುವುದು ಅಷ್ಟೊಂದು ಕಷ್ಟದ ಕೆಲಸವೇನೂ ಆಗಲಿಲ್ಲ ಏಕೆಂದರೆ ಇವರ ತ್ರಿಪದಿಗಳು ಕೂಡ ಛಂದೋಬದ್ಧವಾದ, ಮಾತ್ರಾ, ಗಣಗಳಿಂದ ಕೂಡಿದ ಚುಟುಕುಗಳೇ. ನಮ್ಮ ಜನಪದ ಕವಿ ಸರ್ವಜ್ಞನೇ ಮೊದಲ ಚುಟುಕ ಕವಿ ಎಂದು ಡಾ. ಎಂ.ಜಿ. ಬಿರಾದಾರ ಅವರು ಹೇಳಿದ್ದು. ಸರಿ ಆದ್ದರಿಂದ ಮುಕ್ತ ಛಂದಸ್ಸಿನ ಚುಟುಕು ಬರೆಯುವುದು, ಪಾಟಿಲರಿಗೆ ನೀರು ಕುಡಿದಷ್ಟೇ ಸರಳವಾಯಿತು. ಕೆಲವೇ ದಿನಗಳಲ್ಲಿ ನೂರಾರು ಚುಟುಕುಗಳನ್ನು ಬರೆದ್ದಾರೆ. ಅದರ ಪ್ರತಿಫಲವೇ ಈ ಕವಣೆಗಲ್ಲು.

ಈ ಚುಟುಕುಗಳೆಂಬ ಕಲ್ಲುಗಳನ್ನು ಕವಣಿಯಲ್ಲಿಟ್ಟು ಬೀಸಿದ್ದಾರೆ. ಯಾರಿಗೂ ಗಾಯಗೊಳಿಸಬೇಕೆಂಬ ಉದ್ದೇಶದಿಂದಲ್ಲ. ಸಮಾಜವೆಂಬ ಹೊಲವನ್ನು, ಕೆಲವೊಂದು ಹಕ್ಕಿಗಳು ತಿಂದು ಹಾಳು ಮಾಡುತ್ತಿರುವಾಗ, ಅವುಗಳಿಂದ ರಕ್ಷಿಸಲು, ಕವಣೆಗಲ್ಲನ್ನು ಬೀಸಿದ್ದಾರೆ. ಎಷ್ಟರ ಮಟ್ಟಿಗೆ ಬೆಳೆ ಕಾಯುತ್ತದೋ ಗೊತ್ತಿಲ್ಲ. ಆದರೆ ಕರ್ತವ್ಯ ಮಾಡಲೇಬೇಕಲ್ಲ? ಮಾಡಿದ್ದಾರೆ. ಚುಟುಕಿಗೆ ಹನಿಗವನ, ಮಿನಿಗವನ, ಹೈಕು ಹೀಗೆ ನಾನಾ ವಿಧದಲ್ಲಿ ಕರೆಯುವುದುಂಟು ಈ ಪ್ರಕಾರದ ಮುಖ್ಯ ಗುಣವೆಂದರೆ ಕಿರಿಯದರಲ್ಲಿ ಪಿರಿದರ್ಥವನ್ನು ತುಂಬುವುದು. ಹೇಳಬೇಕಾದ ವಿಷಯವನ್ನು ಸಂಕ್ಷಿಪ್ತವಾಗಿ, ನೇರವಾಗಿ ಹೃದಯಕ್ಕೆ ತಟ್ಟುವಂತೆ ಹೇಳಿದ್ದಾರೆ.

ಸಾಹಿತ್ಯದ ಪ್ರಕಾರಗಳು, ಅವು ಎಂದರೇನು ಎಂಬುದನ್ನು ಪಾಟೀಲರು ಚುಟುಕುಗಳ ಮೂಲಕವೇ ತಿಳಿಸಿದ್ದಾರೆ.

'ಚುಟುಕು' ಅಂದ್ರ ಗುಲಾಬ ಜಾಮೂನು
'ಕಥೆ' ಉಪ್ಪು ಖಾರ ಹಚ್ಚಿದ ಹುರಿಗಡಲಿ
'ಕವನ' ಅಂದ್ರ ಲೈಟ್ ಟಿಫಿನ್ನೂ
'ಕಾದಂಬರಿ' ಭರಪೂರ ನಿತ್ಯದ ಊಟ
'ಮಹಾಕಾವ್ಯ' ಪಚನವಾಗದ ಹಬ್ಬದ ಊಟ![25]

---

25. ಕವಣೆಗಲ್ಲು, ಸಾಹಿತ್ಯಿಕ ಭಾಗದ, ಸಾಹಿತ್ಯ ಪ್ರಕಾರಗಳು-1, ಪು.ಸಂ. 23.

ಎಂದು ಹೇಳಿದ್ದಾರೆ. ಚುಟುಕಿನ ಮಹತ್ವವನ್ನು ಪಾಟೀಲರು ಹೇಳುತ್ತಾ ;

'ಚುಟುಕು' ಅದು ಆಲದ ಬೀಜ
ಅಡಗಿದೆ ಒಳಗೆ ದಿವ್ಯ ತೇಜ
ನೀರೆರೆದಂತೆ, ಹಿಗ್ಗಿ ಹಲವು ಟಿಸಿಲಾಗಿ
ಆಗುವುದು ಮುಂದೆ ಬಾರಿ ಭೋಜ''[26]

ಆಲದ ಬೀಜ ಚಿಕ್ಕದಾದರೂ ಅದರಲ್ಲಿ ದೊಡ್ಡ ಗುಣವಿದೆ. ನೀರು ಹಾಕಿ ಬೆಳೆಸಿದ ಮರದಂತೆ ದೊಡ್ಡ ಪ್ರಮಾಣದಲ್ಲಿ ಬೆಳೆದು, ಹೆಮ್ಮರವಾಗುತ್ತದೆ. ಅದೇ ರೀತಿ ಚುಟುಕು ಕೂಡಾ ಚಿಕ್ಕದಾದರೂ ಬಹಳ ಪರಿಣಾಮಕಾರಿಯಾಗಿದೆ ಎಂದು ಪಾಟೀಲರು ಚುಟುಕಿನ ಮಹತ್ವವನ್ನು ಆಲದ ಬೀಜಕ್ಕೆ ಹೋಲಿಸಿದ್ದಾರೆ.

'' ಉಂಡ ಅನ್ನ ಕರಗಿಸಲು ತಿರುಗುವುದೇ 'ಹವಾಸೇವನೆ'
ಹಸಿದ ಹೊಟ್ಟೆಯ ಅನ್ನಕ್ಕಾಗಿ ಅಲಿಯವದೇ ಭಿಕ್ಷಾಟನೆ
ತಿರುಗಾಟ ಒಂದೆಯಾದರೂ, ಉದ್ದೇಶ ಬೇರೇನೆ
ಹಾಗೆಯೇ ಬರವಣಿಗೆಯಲ್ಲೂ ಹಲವಾರು ನಮೂನೆ.''[27]

ತಮ್ಮ ಚುಟುಕುಗಳನ್ನು ತಾವೇ ವಿಮರ್ಶಿಸಿಕೊಳ್ಳುವ ಚಟವೂ ಕವಿಗಿದೆ . ಚಟುಕಿನ ಗುಣಲಕ್ಷಣಗಳನ್ನು ಚುಟುಕಿನಿಂದ ಹೇಳಲು ಪ್ರಯತ್ನಿಸಿದ್ದಾರೆ. ಚುಟುಕು ಬಹು ದೀರ್ಘವಾದರೆ ಕಥನ ಕವನವಾಗುವ ಅಪಾಯ ಇದೆ ಎಂಬುದನ್ನೂ ಅರಿತಿದ್ದಾರೆ. ಕವಣೆಕಲ್ಲು, ಪೋಲೀಸ ಪಾಟೀಲರ ಹೊಸ ಸಾಹಸದ ಫಲವೆಂದು ಹೇಳಬಹುದಾಗಿದೆ.

ಜನರಲ್ಲಿ ದ್ವಂದ್ವ, ವಿರೋಧಭಾಸಗಳನ್ನು ಕಂಡು ವಿಡಂಬನೆಯ ಮೂಲಕ ಚಾಟಿಯಂಥ ಚುಟುಕುಗಳನ್ನು ರಚಿಸಲು ತೊಡಗಿ 'ಕವಣೆಗಲ್ಲನ್ನು' ಬೀಸತೊಡಗಿದ್ದಾರೆ.

ಕವಿ ಕೌಟುಂಬಿಕ ಚುಟುಕುಗಳಲ್ಲಿ ವರದಕ್ಷಿಣೆಯಿಲ್ಲದೆ, ಸರಳವಾಗಿ, ದುಂದು ವೆಚ್ಚ ಮಾಡದೆ ಮದುವೆ ಮಾಡಬೇಕು ಎಂದಿದ್ದಾರೆ. ಬಡವನ ಅಂತರಾತ್ಮದ ವೇದನೆಯನ್ನು ಚುಟುಕುಗಳ ಮೂಲಕ ವ್ಯಕ್ತಪಡಿಸಿದ್ದಾರೆ.

'' ಭಾರಿ ವೆಚ್ಚ ಮಾಡಿಲಗ್ನ ಮಾಡೋದು
ಈಗ ಅದೊಂದು ಪ್ರೆಸ್ಟಿಜಿನ ಸಂಗತಿ ;
ಶ್ರೀಮಂತನ ನೋಡಿ, ಬಡವ ತಾ ಮಾಡೋದು
ಸಾಲ ಹೆಚ್ಚಾಗಿ, ಬರುವುದು ಖಾತ್ರಿ, ದುರ್ಗತಿ ''[28]

---

26. ಕವಣೆಗಲ್ಲು - ಸಾಹಿತ್ಯಿಕ ಭಾಗದ, ಸಾಹಿತ್ಯ ಪ್ರಕಾರಗಳು-1, ಪು. ಸಂ. 23.
27. ಕವಣೆಗಲ್ಲು - ಸಾಹಿತ್ಯಿಕ ಭಾಗದ, ಸಾಹಿತ್ಯ ಪ್ರಕಾರಗಳು-2, ಪು. ಸಂ. 23.
28. ಕವಣೆಗಲ್ಲು - ಕೌಟುಂಬಿಕ ಭಾಗದ, ಭಾರಿ ಲಗ್ನ-27, ಪು. ಸಂ. 11

ಭರ್ಜರಿ ಮದುವೆ ಮಾಡುವುದು ಶ್ರೀಮಂತರ ಘನತೆಯಾಗಿದೆ. ಶ್ರೀಮಂತರನ್ನು ನೋಡಿ ಬಡವ ತಾನು ಹಾಗೇ ಮಾಡುವುದಕ್ಕೆ ಹೋಗುತ್ತಾನೆ. ಕೊನೆಗೆ ಸಾಲದಿಂದ ದುರ್ಗತಿ ಹೊಂದುತ್ತಾನೆ. ಎಂದು ಕೌಟುಂಬಿಕ ಚುಟುಕುಗಳಲ್ಲಿ ಹೇಳಿದ್ದಾರೆ

'' ಆಡಂಬರ ಲಗ್ನ ಬರೀ ಖರ್ಚಿಗೆ ಮೂಲ
ಮಾಡ್ದಾಂವ ಬೀಳ್ತಾನ ನೆಲಕ ಆಮ್ಯಾಲ
ಅದಕ್ಕs ಗಂಧರ್ವ ವಿವಾಹ ಭಾಳ ಬೆಸ್ಟ
ಖರ್ಚು, ವರದಕ್ಷಿಣೆ, ಏನಿಲ್ಲ ಕಷ್ಟ ''[29]

ಪಾಟೀಲರು 'ಗಂಧರ್ವ ವಿವಾಹ' ದಿಂದ ಖರ್ಚು, ವರದಕ್ಷಿಣೆ ಏನು ಇರುವುದಿಲ್ಲ. ಆದ್ದರಿಂದ ಗಂಧರ್ವ ವಿವಾಹ ಬಹಳ ಉತ್ತಮವಾದುದೆಂದು ಹೇಳುತ್ತಾರೆ.

'ವರದಕ್ಷಿಣೆ ಅನ್ನೊದು ಪಂಚ ಪೀಡೆ
ಹಾಳಾಗಿ ಹೋಗಿವೆ ಹಲವು ಸಂಸಾರ
ಬೇಡ ಎನ್ನುವ ಎರಡಕ್ಷರದಿ ಇಹುದು,
ಸುಖ ಸಂಸಾರದ ನಿಜವಾದ ಸಾರ''[30]

ವರದಕ್ಷಿಣೆ ಒಂದು ಸಾಮಾಜಿಕ ಪಿಡುಗಾಗಿದೆ. ಇದರಿಂದ ಅನೇಕ ಹೆಣ್ಣು ಮಕ್ಕಳ ಜೀವನ ಮತ್ತು ಸಂಸಾರಗಳು ಹಾಳಾಗಿವೆ. ಆದ್ದರಿಂದ ಪಾಟೀಲರು ಚುಟುಕುಗಳ ಮೂಲಕ ವರದಕ್ಷಿಣೆ ತೆಗೆದುಕೊಳ್ಳಬಾರದು. ಇದರಿಂದ ಅನೇಕ ಸಂಸಾರಗಳು ನೆಮ್ಮದಿಯ ನಿಟ್ಟುಸಿರು ಬಿಡುತ್ತವೆ ಎಂದು ಹೇಳಲಾಗುತ್ತದೆ.

ಹಳ್ಳಿ ಕುಟುಂಬದಲ್ಲಿ ಬೆಳೆದು ಬಂದ ಸಿದ್ಧರಾಮ ಪೋಲೀಸ ಪಾಟೀಲರು ದೇಸಿಯನ್ನು ಅರಗಿಸಿಕೊಂಡು ತಮ್ಮದೇ ಆದ ವಿಶಿಷ್ಟ ಆಡು ಮಾತಿನ ಚಮತ್ಕಾರವನ್ನು ಈ ಕವಣೆಗಲ್ಲಿನಲ್ಲಿಯೂ ಅಳವಡಿಸಿಕೊಂಡದ್ದು ಕಂಡುಬರುತ್ತದೆ. ಆಳವಾದ ಜೀವನಾನುಭವ ಹೊಂದಿದ ಈ ಕವಿ ವೈಚಾರಿಕತೆಯ ಅಡಿಪಾಯದ ಮೇಲೆ, ನೀತಿಯ ನೆಲೆಗಟ್ಟಿನ ಮೇಲೆ ನಿಂತು 'ಚುಟುಕ ಬಾಣಗಳನ್ನು' ಬಿಡುತ್ತಿರುವುದು ಕಂಡುಬರುತ್ತದೆ.

'' ಚುಟುಕು ಇದು ಬಹು ಚೂಪಾದ ಬಾಣ
ನೇರ ಹೃದಯಕ್ಕೆ ಇದರ ಪ್ರಯಾಣ ''[31]

---

29. ಕವಣೆಗಲ್ಲು - ಕೌಟುಂಬಿಕ ಭಾಗದ, ಗಂಧರ್ವ ವಿವಾಹ-28, ಪು.ಸಂ. 12.
30. ಕವಣೆಗಲ್ಲು -ಕೌಟುಂಬಿಕಕ ಭಾಗದ, ವರದಕ್ಷಿಣೆ-33, ಪು. ಸಂ. 13.
31. ಕವಣೆಗಲ್ಲು-ಸಾಹಿತ್ಯಿಕ ಭಾಗದ ಬಾಣ-3, ಪು.ಸಂ. 23

ನೂರಾರು ಮಂದಿ ಚುಟುಕು ರಚನೆಗೆ ತೊಡಗಿರುವಾಗ ತಾವೇನು ಕಮ್ಮಿ ಎಂದು ಕೈ ಹಾಕಿದರೂ ಯಾರ ಪ್ರಭಾವಕ್ಕೂ ಒಳಗಾಗದೆ ವಿಶಿಷ್ಟ ರೀತಿಯಿಂದ ಬೇರೆಯಾಗಿ ನಿಲ್ಲುವ ಛಾತಿ ಪಾಟೀಲರಿಗೆ ಇದೆ ಎಂದು ಈ 'ಕವಣೆಗಲ್ಲಿನ' ಮೂಲಕ ತೋರಿಸಿ ಕೊಟ್ಟಿದ್ದಾರೆ.

## 6. ಜೀವನ ಚರಿತ್ರೆಗಳು :

ಯಾವುದೇ ವ್ಯಕ್ತಿಯ ಬದುಕನ್ನು ಸಾಹಿತ್ಯಿಕವಾಗಿ ನಿರೂಪಿಸಿದಾಗ ಜೀವನದ ಚರಿತ್ರೆ ನಿರ್ಮಾಣವಾಗುತ್ತದೆ. ಜೀವನ ಚರಿತ್ರೆ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಒಂದು ಹಾಗೂ ವ್ಯಕ್ತಿಯ ಹುಟ್ಟು ಬೆಳವಣಗೆಯ ಸಾಧನೆ ಮುಂತಾದ ವಿಷಯಗಳು ಲಭ್ಯವಾಗುತ್ತವೆ. ಸಾಹಿತ್ಯ ವಿಮರ್ಶೆಗೆ ಮತ್ತು ಸಾಹಿತ್ಯ ಸಂಶೋಧನೆಗೆ ಅನುಕೂಲವಾಗುತ್ತದೆ. ಈ ದೃಷ್ಟಿಯಲ್ಲಿ ಶ್ರೀ ಸಿದ್ಧರಾಮ ಪೋಲೀಸ ಪಾಟೀಲ ಅವರು ರಚಿಸಿದ ಚರಿತ್ರೆಗಳು.

★ ನಿರಂಜನ ಜಂಗಮ ಅಲ್ಲಮಪ್ರಭು.

★ ಹಾವಿನ ಹಾಳ ಕಲ್ಲಯ್ಯ

★ ಶ್ರೀ ಕಾಡಸಿದ್ಧೇಶ್ವರರು

★ ಪೂ. ಪ್ರಭುಲಿಂಗಯ್ಯಾ ಮಲ್ಲಾಪೂರ

ಕಲಬುರ್ಗಿ ಕಲ್ಯಾಣದ ಹೆಬ್ಬಾಗಿಲು ಕವಿ, ಸಾಹಿತಿಗಳ ತೂಗು ತೊಟ್ಟಿಲು, ಪುಣ್ಯ ಪುರಷರ ಪಾವನ ಚಾರಿತ್ರ್ಯದ ನೆಲೆವೀಡು. ಈ ನಾಡಿನಲ್ಲಿ ಅಚ್ಚಳಿಯದ ತಮ್ಮ ಹೆಜ್ಜೆ ಗುರುತುಗಳನ್ನು ಬಿಟ್ಟು ಹೋದ ಮಹನೀಯರು ಅಸಂಖ್ಯಾತ ಅವರನ್ನು ಗುರುತಿಸಿ ಅವರ ಪಾವನ ಚರಿತ್ರೆ ಹೊರತಂದು ಮಕ್ಕಳ ಕೈಗೆ ನೀಡಿದರೆ, ಆ ಮಹನೀಯರ ಹೋರಾಟದ ಬದುಕು ನಮ್ಮ ಮುಂದಿನ ಮಕ್ಕಳಿಗೆ ದಾರಿ ದೀಪವಾಗುವುದರಲ್ಲಿ ಸಂದೇಹವಿಲ್ಲ.

### 1. ನಿರಂಜನ ಜಂಗಮ ಅಲ್ಲಮ ಪ್ರಭು :

ಜಾತಿಗಳೇ ಇಲ್ಲ ದಂತಹ ಧರ್ಮದ ಕಲ್ಪನೆಯನ್ನು ಕೊಟ್ಟ ಪ್ರಥಮ ಶ್ರೇಯಸ್ಸು ಬಸವಾದಿ ಶರಣರಿಗೆ ಸಲ್ಲುತ್ತದೆ. ಮನುಷ್ಯನ ಮಧ್ಯದಲ್ಲಿ ಕಟ್ಟಿದ ವರ್ಣದ ಗೋಡೆಗಳನ್ನು ಕೆಡವಿ ಹಾಕಿದರು. ಕಾಯಕವೇ ಕೈಲಾಸವೆಂದು ಸಾರಿ ಪ್ರತಿಯೊಬ್ಬರು ಸತ್ಯ ಶುದ್ಧ ಕೆಲಸವನ್ನು ಕೈಕೊಳ್ಳುವಂತೆ ಬೋಧಿಸಿ ದುಡಿಮೆಯನ್ನು ಗೌರವವನ್ನು ಎತ್ತಿ ಹಿಡಿದು ಸಮಾಜವನ್ನು ಚೇತನಗೊಳಿಸಿದರು. ಅಂಥ ಶರಣರ ಜೀವನ ಸಂದೇಶಗಳು ನಾಡಿನ ಜನತೆಗೆ ಲಭಿಸಬೇಕೆಂಬ ಉದ್ದೇಶದಿಂದ ಚರಿತ್ರೆಯನ್ನು ಬರೆದಿದ್ದಾರೆ.

ಕನ್ನಡ ನಾಡು ಪುಣ್ಯದ ಬೀಡು, ಧರ್ಮವು ಅಳಿದು ಪಾಪವು ಹೆಚ್ಚಾದಾಗ, ಧರ್ಮ ಜಾಗೃತಿಗಾಗಿ ಅನೇಕ ಮಹಾಪುರುಷರು ಇಲ್ಲಿ ಕಾರ್ಯ ಸಾಧನೆ ಮಾಡಿದ್ದಾರೆ. ಅಂಥವರಲ್ಲಿ ಅಲ್ಲಮ ಪ್ರಭುವು ಒಬ್ಬ. ಈತನು ಹನ್ನೆರಡನೆಯ ಶತಮಾನದ ಶಿವಶರಣರಿಗೆಲ್ಲ ಪೂಜ್ಯನಾದವನು.

ನಿರಹಂಕಾರ ಮತ್ತು ಸುಜ್ಞಾನಿಗಳೆಂಬ ದಂಪತಿಯ ಮಗನಾಗಿ, ಬಳ್ಳಿಗಾವಿಯಲ್ಲಿ ಜನಿಸಿದನು. ವೇದ ಶಾಸ್ತ್ರ ಅಭ್ಯಾಸ ಮಾಡಿ, ಅಂತರಂಗದಲ್ಲಿ ಜ್ಞಾನ ಅಳವಡಿಸಿಕೊಂಡನು. ಅಲ್ಲಮನ ಹೆಂಡತಿ ಕಾಮಲತೆ ಜ್ವರದಿಂದ ಬಳಲಿ ಸತ್ತಿದ್ದರಿಂದ, ಅಲ್ಲಮನಿಗೆ ವಿರಕ್ತಿ ಮೂಡಿತು.

ಹೀಗೆ ವೈರಾಗ್ಯ ಪಡೆದ ಅಲ್ಲಮ ಪ್ರಬು ನಾಡಿನಲ್ಲೆಲ್ಲಾ ಪ್ರವಾಸ ಮಾಡಿದನು. ಮಹಾತ್ಮರ ಸಂದರ್ಶನ ಪಡೆದನು. ಸಂಕಲ್ಪ ಸಿದ್ಧಿ, ದಿವ್ಯ ಜ್ಞಾನಗಳು ಆತನಲ್ಲಿ ಬೆಳೆದು ಭಂದವು. ಒಂದು ಕಡೆ ನಿಲ್ಲುವುದು ಜಂಗಮ ಲಕ್ಷಣವಲ್ಲ. ಅದಕ್ಕೆಂದು ಯಾವಾಗಲೂ ಸಂಚರಿಸುತ್ತ ಇರುತ್ತಿದ್ದನು. ಅಜ್ಞಾನದಿಂದ ತುಂಬಿದ ಜನರಲ್ಲಿಗೆ ಹೋಗುತ್ತಿದ್ದ ಅವರಿಗೆ ಜ್ಞಾನದ ಅರಿವು ಮೂಡಿಸುತ್ತಿದ್ದ. ಸಮಸ್ಯೆಗಳನ್ನು ಬಗೆಹರಿಸಿ, ಸರಿದಾರಿ ತೋರಿಸುತ್ತಿದ್ದ. ಅಲ್ಲಲ್ಲಿಯ ಸಾಧಕರಿಗೆ ನಿಜದ ನಿಲುವನ್ನು ತಿಳಿಸುತ್ತಾ ಸಾಗುತ್ತಿದ್ದನು.

ಅಲ್ಲಮ ಪ್ರಭು ಶ್ರೇಷ್ಠ ವಚನಕಾರನಾಗಿ, ಸಾವಿರಾರು ವಚನಗಳನ್ನು ರಚಿಸಿದ್ದಾರೆ. ಈತನು ವಚನಗಳಲ್ಲಿ 'ಗುಹೇಶ್ವರ' ಎಂಬ ಅಂಕಿತ ಬರುತ್ತದೆ. ಇವನ ವಚನಗಳು ಬಹಳ ಅರ್ಥಗರ್ಭಿತವಾಗಿವೆ. ವಿಚಾರಗಳ ಔನತ್ಯವಿದೆ. ಪ್ರತಿಭೆಯ ಕೆಚ್ಚಿದೆ. ಅನುಭಾವ ಐಸಿರಿ ಅಲ್ಲಮನ ವಚನಗಳಲ್ಲಿ ತುಂಬಿ ತುಳುಕಿದೆ. ಆಂತೆಯೇ ಈತನ 'ಮಾತು ಜ್ಯೋತಿರ್ಲಿಂಗವಾಗಿದೆ'.

ಅಲ್ಲಮ ಪ್ರಭುವಿನ ವಚನಗಳಲ್ಲಿ ಬರುವ ಕೆಲವೊಂದು ನುಡಿಗಳು ಸತ್ಯಸುಂದರವಾಗಿವೆ. ಸರ್ವರಿಗೂ ಮಾರ್ಗದರ್ಶನ ನೀಡುವ ಶಕ್ತಿಯಿಂದ ಕೂಡಿವೆ. ಅನುಭಾವಿಯ ಅಂತರಂಗದಿಂದ ಬಂದ ಅಮೂಲ್ಯ ರತ್ನಗಳಂತಿವೆ.

- ''ಮಾತೆಂಬುದು ಜ್ಯೋತಿರ್ಲಿಂಗ! ಸ್ವರವೆಂಬುದು ಪರತತ್ವ!!''
- 'ರೂಪಿಂಗೆ ಕೇಡುಂಟು, ನಿರೂಪಿಂಗೆ ಕೇಡಿಲ್ಲ.'
- 'ತನ್ನ ತಾನರಿವಂಗೆ ಅರಿವೇ ಗುರು.'
- 'ಪುಣ್ಯವುಳ್ಳ ಕಾಲಕ್ಕೆ ಪಾಷಾಣ ಪರುಷವಪ್ಪುದು ನೋಡಯ್ಯ.'
- 'ಒಳಗೆಂಬುದೆ ದೇವಲೋಕ ಹೊರಗೆಂಬುದೆ ಮರ್ತ್ಯಲೋಕ.'

- 'ತಲೆಯುಟ್ಟುಣಲೊಲ್ಲದೆ ಒಲೆಯಲಟ್ಟುಂಬರೆ?'
- 'ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ''[32]

ಹೀಗೆ ಇನ್ನೂ ಬಹಳಷ್ಟು ಉದಾಹರಿಸಬಹುದು. ಅಲ್ಲಮಪ್ರಭು ಲೋಕೋದ್ಧಾರಕ್ಕಾಗಿ, ಧರ್ಮ ಜಾಗೃತಿಗಾಗಿ ಮಾಡಿದ ಕಾರ್ಯ ಅಪಾರವಾದದ್ದು. ತನ್ನ ಬಾಳನ್ನೇ ಅದಕ್ಕಾಗಿ ಸಲ್ಲಿಸಿದರು. ಹಿರಿಕಿರಿಯರೆನ್ನದೆ ಸರ್ವರಿಗೂ ಮಾರ್ಗದರ್ಶನ ಮಾಡಿದನು. ಹೆಣ್ಣು ಗಂಡುಗಳಲ್ಲಿದ್ದ ಭೇದವನ್ನು ತೊಡೆದು ಹಾಕಿದನು. ಸರ್ವರಿಗೂ ಸಮಾನರೆಂಬ ಭಾವನೆ ಮೂಡಿಸಿದನು. ಸರ್ವರಿಗೂ ಸ್ವತಂತ್ರವಾಗಿ ಬಾಳುವ ಹಕ್ಕಿದೆ ಎಂಬುದನ್ನು ತಿಳಿಸಿಕೊಟ್ಟನು. ದಾರಿ ತಪ್ಪಿದವರನ್ನು ಬಯ್ಯಲಿಲ್ಲ. ಅಹಂಕಾರಿಗಳ ಗರ್ವ ಹರಣ ಮಾಡಿ ಜ್ಞಾನೋಪದೇಶ ಮಾಡಿದನು. ಕರುಣೆ, ಔದಾರ್ಯದಿಂದ ಮಾರ್ಗದರ್ಶನ ಮಾಡಿದನು. ಜ್ಞಾನಾಂಧರಿಗೆ ಜ್ಞಾನದೀವಿಗೆಯಾಗಿ, ದಿಕ್ಕು ತಪ್ಪಿದವರಿಗೆ ದಿಕ್ಸೂಚಿಯಾಗಿ, ಗರ್ವಿತರಿಗೆ ಗುರುವಾಗಿ ದಾರಿ ತೋರಿದನು. ಪುರುಷ ಮುಟ್ಟಿದ್ದಲ್ಲ ಬಂಗಾರ್ವಾಗುವಂತೆ, ಅಲ್ಲಮನ ಸಂಪರ್ಕ ಹೊಂದಿದವರೆಲ್ಲ ಶರಣರಾದರು. ದೇಶದಲ್ಲಿ ದರ್ಮ ಜಾಗೃತಿಯಾಯಿತು. ಭೂತಳವನ್ನು ಕೈಲಾಸವನ್ನಾಗಿ ಪರಿವರ್ತಿಸಿದನು.

ಅಲ್ಲಮನಂಥ ಮಹನೀಯರು ಹುಟ್ಟಿ ಆ ರೀತಿ ಬಾಳಿದ್ದರಿಂದಲೇ ನಮ್ಮ ಸಂ ಸಂಸ್ಕೃತಿಗೆ ದೊಡ್ಡತನ ಬಂದಿರುವುದು ಅಂಥವರ ಬುದ್ಧಿಮತ್ತೆ, ವಿಚಾರಧೋರಣೆ ಕಾರ್ಯ ಶಕ್ತಿ, ಸತ್ಯ ಸಿದ್ಧಿ ಈಗ ಮತ್ತೆ ಬೇಕಾಗಿವೆ. ಅಂಥ ದಿವ್ಯ ವ್ಯಕ್ತಿ ಸಂದೇಶವನ್ನು ಹೊತ್ತ ಮಹಾ ವ್ಯಕ್ತಿ ಇಂದಿನಜಗತ್ತಿಗೆ ಮತ್ತೊಮ್ಮೆ ಜನಿಸಿ ಬರಬೇಕಾಗಿದೆ. 12ನೇಯ ಶತಮಾನದಲ್ಲಿದ್ದ ಶಾಂತಿ, ಸಮಾಜ ಸುಧಾರಣೆ ವ್ಯಕ್ತಿ ಸ್ವಾತಂತ್ರ್ಯ, ಧರ್ಮ ಜಾಗೃತಿ ಇಂದು ಮೂಡಿ ಬರಬೇಕಾಗಿದೆ. ಅಂದಾಗಲೇ ಮಾತ್ರ ಈ ನಾಡಿಗೆ ಶ್ರೇಯಸ್ಸಿದೆ. ನಾಡಿನ ಜನರಶ್ರೇಯೋಭಿವೃದ್ಧಿಯಿದೆ. ಆದ್ದರಿಂದ ಚರಿತ್ರೆ ಓದುವುದರಿಂದ ಶರಣರ ಸಂದೇಶ ಜನರಿಗೆ ತಲುಪಿ ಅವರ ಬದುಕಿನಲ್ಲಿ ಪರಿಣಾಮವುಂಟು ಮಾಡುತ್ತದೆ.

## 2. ಹಾವಿನ ಹಾಳ ಕಲ್ಲಯ್ಯ :

ಸುರಪುರ ತಾಲ್ಲೂಕಿನ ದಕ್ಷಿಣ ದಿಕ್ಕಿಗೆ 10 ಕಿ.ಮಿ. ದೂರದಲ್ಲಿಲ್ಲಿ 'ಹಾವಿನಹಾಳ'ವೆಂದು ಗ್ರಾಮವಿದೆ. ಇದೇ ಕಲ್ಲಯ್ಯನ ಜನ್ಮ ಸ್ಥಳ. ತಂದೆ-ಶಿವನಯ್ಯ, ತಾಯಿ ಸೋಮವ್ವೆ. ಇವರದು ವಿಶ್ವಕರ್ಮ ಮನೆತನ.

---

32. ನಿರಂಜನ ಜಂಗಮ, ಅಲ್ಲಮ ಪ್ರಭು - ಸಂದೇಶ ಪು. ಸಂ. 23.

ಕಲ್ಲಯ್ಯನಿಗೆ ಮನೆಯ ಮತ್ತು ಹೊರಗಿನ ಜಂಜಾಟ ಬೇಕಾಗಿರಲಿಲ್ಲ. ಅವನ ಮನಸ್ಸು ಚಿಕ್ಕಂದಿನಿಂದಲೇ ಆಧ್ಯಾತ್ಮದ ಕಡೆಗೆ ಒಲಿಸಿತು. ಅಲ್ಲಮನ ಶಿವಾನುಭವ ಗೋಷ್ಠಿಯಲ್ಲಿ ಕಲ್ಲಯ್ಯ ಭಾಗಿಯಾಗಿ, ಅನೇಕ ಪ್ರಶ್ನೆಗಳನ್ನು ಮಾಡುತ್ತಿದ್ದನು. ಹಲವಾರು ವಿಷಯಗಳ ಬಗ್ಗೆ ಚರ್ಚೆ ಶಿವಾನುಭವಗೋಷ್ಠಿಯಲ್ಲಿ ನಡೆಯತೊಡಗಿದವು. ಆಗಲೇ ಕಲ್ಲಯ್ಯನೂ ವಚನ ರಚನೆಗೆ ಕೈ ಹಾಕಿದನು. ಅನುಭವ ಬಲಿತ ಹಾಗೆ ಅನುಭಾವವನ್ನು ಹೊರ ಹಾಕಲು ವಚನಗಳೇ ಸಾಧನವಾದವು. ಎಂಬುದನ್ನು ಆತನ ಚರಿತ್ರೆಯಿಂದ ಕಾಣಬಹುದು.

ಶರಣರು ತಮ್ಮ ಆತ್ಮೋದ್ಧಾರದ ಜೊತೆಗೆ ಸಮಾಜದ ಎಲ್ಲ ಜನರನ್ನು ಉದ್ಧರಿಸುವ ಕಾರ್ಯ ಕೈಗೊಂಡರು. ಆತ್ಮಸಾಕ್ಷಾತ್ಕಾರಕ್ಕಾಗಿ ಸನ್ಯಾಸಿಯಾಗಬೇಕಿಲ್ಲ. ಸಂಸಾರಿಯಾಗಿಯೂ ಶಿವಯೋಗ ಸಾಧನೆ ಮಾಡಿಕೊಳ್ಳಬಹುದು. ಮನುಷ್ಯನಿಗೆ ಹುಟ್ಟು ಮುಖ್ಯವಲ್ಲ. ಆತನು ಮಾಡುವ ಸಾಧನೆ ಮುಖ್ಯ. ಕಾಯಕದಲ್ಲಿ ಮೇಲು -ಕೀಳು ಎಣಿಸಬಾರದು. ದೇವನೊಬ್ಬ ನಾಮ ಹಲವು, ಪೂಜೆಗಾಗಿ ಗುಡಿಗಳಿಗೆ ಹೋಗುವ ಅವಶ್ಯಕತೆಯಿಲ್ಲ. ದೇವರು ತನ್ನಲಿಯೇ ಇದ್ದಾನೆ. ಗುರುಕೊಟ್ಟ ಇಷ್ಟಲಿಂಗ ಧರಿಸಿ, ಅದರ ಮುಖಾಂತರ ತನ್ನನ್ನು ತಾನು ಅರಿತುಕೊಳ್ಳಬೇಕು, ಶರಣನಾದವನಿಗೆ ಯಾವುದೇ ಜಾತಿ ಕುಲಗಳ ಬಂಧನವಿಲ್ಲ. ನಡೆ ನುಡಿ ಒಂದಾಗಿರಬೇಕು. ಬದುಕಿಗಾಗಿ ಸತ್ಯ, ಶುದ್ಧವಾದ ಕಾಯಕ ಮಾಡಬೇಕು. ದುಡಿದು ಬಂದದ್ದರಲ್ಲಿ ತಾನುಂಡು, ದಾಸೋಹ ಮಾಡಬೇಕು ಇಂದಿಗೆ, ನಾಳಿಗೆ ಎಂದು ಕೂಡಿಡಬಾರದು. ಹೀಗೆ ಹಲವಾರು ಸಂದೇಶಗಳನ್ನು ಶರಣರು ನೀಡಿದರು. ಈ ಸಂದೇಶಗಳು ಆವು ನಮ್ಮ ಜೀವನದಲ್ಲಿ ಅರಿತುಕೊಳ್ಳುವುದಕ್ಕೆ ಸಹಕರಿಸುತ್ತವೆ.

ಸಮಾಜ, ಧರ್ಮ, ಇಹ-ಪರ, ಆಚಾರ, ವ್ಯವಹಾರಗಳ ಬಗ್ಗೆ ವೈಚಾರಿಕವಾಗಿ ಚಿಂತಿಸಿದರು. ವೈಜ್ಞಾನಿವಾಗಿ ವಿವೇಚಿಸಿದರು. ಜನಸಾಮಾನ್ಯರಿಗೆ ತಿಳಿಸಿ ಹೇಳಿದರು. ಸಮಾಜದಲ್ಲಿಯ ಅಂಧಕಾರ, ಮೌಢ್ಯತೆಗಳನ್ನು ಹೊಡೆದೋಡಿಸಿದರು. ಪುರೋಹಿತವರ್ಗ ಗಳಿಂದಾಗುತ್ತಿದ್ದ ಶೋಷಣೆಯನ್ನು ತಪ್ಪಿಸಿದರು. ಸಮಾಜದಲ್ಲಿ ಒಂದು ಹೊಸ ಕ್ರಾಂತಿಯನ್ನೇ ಎಬ್ಬಿಸಿದರು. ಶರಣರು ಲೋಕದ ಉದ್ಧಾರಕ್ಕಾಗಿ ಮಾಡಿದ ಪ್ರಯತ್ನಗಳನ್ನು ಅವರ ಚರಿತ್ರೆಗಳ ಮುಖಾಂತರ ಕಾಣುತ್ತೇವೆ.

ಹಿಂದಿನ ಇತಿಹಾಸ ಅರಿಯದೆ, ಮುಂದೆ ಹೊಸ ಇತಿಹಾಸ ಸೃಷ್ಟಿಸಲಾಗದು ಎಂಬ ಮಾತಿನಂತೆ, ಹಿಂದಿನವರು ಮಾಡಿದ ಕೆಲಸಗಳ ಬಗ್ಗೆ ಅರಿತುಕೊಳ್ಳದೇ ಹೋದರೆ, ಮುಂದೇನು ಮಾಡಬೇಕೆಂಬುದು ನಮಗೆ ಗೊತ್ತಾಗದು. ಆದ್ದರಿಂದ ಈ ಚರಿತ್ರೆ ಮುಖ್ಯವಾಗಿದೆ.

### 3. ಶ್ರೀ ಕಾಡಸಿದ್ಧೇಶ್ವರರು :

ವಚನ ಸಾಹಿತ್ಯವು ಕನ್ನಡದ ಶ್ರೇಷ್ಠ ನಿಧಿಯಾಗಿರುವುದು. ಅದು ವಿಶ್ವ ಸಾಹಿತ್ಯಕ್ಕೆ ನೀಡಿರುವ ಅದ್ವಿತೀಯ ಕೊಡುಗೆ. ಬಸವಾದಿ ಶಿವಶರಣರ ಕ್ರಿಯಾಜ್ಞಾನಗಳ ಸುಂದರ ಸಮನ್ವಯ ಅನುಭವಾಮೃತವದು. ಹನ್ನೊಂದು ಹನ್ನೆರಡನೆಯ ಶತಮಾನದ ಶಿವಶರಣರಂತೆ ಹದಿನೇಳನೆಯ ಶತಮಾನದ ಕಾಡಸಿದ್ಧೇಶ್ವರರೂ ಶ್ರೇಷ್ಠ ವಚನಕಾರರೆನಿಸುವರು.

ಶ್ರೀ ಕಾಡಸಿದ್ಧೇಶ್ವರರು "**ಕಾಡಿನೊಳಗಾದ ಶಂಕರ ಪ್ರಿಯ ಚೆನ್ನ ಕದಂಬಲಿಂಗ ನಿರ್ಮಾಯ ಪ್ರಭುವೆ**" ಎಂಬ ಅಂಕಿತದಲ್ಲಿ ಐದುನೂರಕ್ಕೂ ಹೆಚ್ಚು ವಚನಗಳನ್ನು ರಚಿಸಿರುವರು. ಶ್ರೀ ಕಾಡಸಿದ್ದೇಶ್ವರರು ಸಿದ್ಧಿಪುರುಷರು, ಮಹಾತ್ಮರು, ಪವಾಡ ಪುರುಷರು, ಮೇಲಾಗಿ ಬೆಡಗಿನ ವಚನಕಾರರೆನಿಸಿದ್ದಾರೆ. ಸಿದ್ಧ ಪರಂಪರೆಗೆ ಸೇರಿದ ಸಿದ್ದಗಿರಿಮಠದ ವೀರಶೈವ ಮಠಾಧಿಪತಿಗಳಿವರು ಗುರು ಸಂಗಮೇಶ್ವರ ದೇವರ ಮಾರ್ಗದರ್ಶನದಲ್ಲಿ ಬೆಳೆದುಬಂದ ಶ್ರೇಷ್ಠ ಶಿಷ್ಯರು ಇವರ ವಚನಗಳಲ್ಲಿ ವೀರ ಶೈವ ಧರ್ಮದ ತತ್ವ ನೀತಿ ಬೋಧನೆ ವಿಸ್ತಾರಗೊಂಡಿರುವುದು. 'ಭಕ್ತ'ನಾದರೆ ಬಾಳೆ ಹಣ್ಣಿನಂತಿರಬೇಕು, ಬೆಲ್ಲದ ಕುಳ್ಳಿಯಂತಿರಬೇಕು. ಮಾವಿನ ಫಲದಂತಿರಬೇಕೆಂಬುದನ್ನು ಶ್ರೀ ಕಾಡಸಿದ್ದೇಶ್ವರರು ತಮ್ಮ ವಚನಗಳಲ್ಲಿ ಸಾರಿರುವರು. ಜನತೆಯಲ್ಲಿದ್ದ ಅಂಧಶ್ರದ್ಧೆ, ಸ್ವಾರ್ಥ ದ್ವೇಷಗಳನ್ನು ಆಸ್ಪೃಶ್ಯತೆಯನ್ನು ಹೋಗಲಾಡಿಸಲು ಮನಮಿಡಿಯುವಂತೆ ಖಂಡಿಸಿರುವದನ್ನು ಲೇಖಕರು ಅವರ ವಚನಗಳಿಂದ ಹೆಕ್ಕಿ ತೆಗೆದಿರುವರು. ಕಾಲಕಾಲಕ್ಕೆ ಈ ಪೀಠಕ್ಕೆ ಬಂದವರೆಲ್ಲರೂ ಕಾಡಸಿದ್ಧೇಶ್ವರರಾಗಿರುವರೆಂಬುದನ್ನು ಲೇಖಕರು ವಿವರಿಸಿರುವರು.

ಶ್ರೀ ಕಾಡಸಿದ್ಧೇಶ್ವರರ ಕಾಲ ಪ್ರದೇಶಗಳ ಕುರಿತು ಸಂಶೋಧಕರು ನಡೆಸಿದ ಚರ್ಚೆಯ ಹಿನ್ನಲೆಯಲ್ಲಿ, ಶ್ರಿ ಕಾಡಸಿದ್ಧೇಶ್ವರರು .ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಗುಂಡೇವಾಡಿ ಗ್ರಾಮದವರು. ಸತ್ಯಕ್ಕ ಶಿವಪುತ್ರಯ್ಯನವರ ಸತ್ಪುತ್ರರೆಂದು ಲೇಖಕರು ಭಾವಿಸಿರುವರು. ಶ್ರೀ ಕಾಡಸಿದ್ಧೇಶ್ವರರು ಕರ್ನಾಟಕ, ಅಂಧ್ರ ಮಹಾರಾಷ್ಟ್ರ ಪ್ರದೇಶಗಳಲ್ಲೆಲ್ಲ ಸಂಚರಿಸುತ್ತಾ, ಹೋದ ಹೋದಲ್ಲೆಲ್ಲಾ ಮಠ ಪೀಠಗಳನ್ನು ಸ್ಥಾಪಿಸಿದವರು. ಭಕ್ತರ ಅವರ ಸ್ಮಾರಕವಾಗಿ ಅಲ್ಲಲ್ಲಿ ಗುಡಿ ಗುಂಡಾರ, ಮಠ ಪೀಠಗಳನ್ನು ಸ್ಥಾಪಿಸಿರುವರು. ಭಕ್ತರು ಅವರ ಸ್ಮಾರಕವಾಗಿ ಅಲ್ಲಲ್ಲಿ ಗುಡಿ -ಗುಂಡಾರ ಮಠ ಪೀಠಗಳನ್ನು ಕಟ್ಟಿಸಿ, ಜಾತ್ರೋತ್ಸವಗಳನ್ನು ನಡೆಸುತ್ತ ಬಂದಿರುವರು.

ಶ್ರೀ ಕಾಡಸಿದ್ಧೇಶ್ವರರು ಲೋಕಸಂಚಾರಿಗಳಾಗಿ ಕೊನೆಗೆ ಕೊಲ್ಲಾಪೂರ ಸಮೀಪದ ಸಿದ್ಧಗಿರಿಯಲ್ಲಿ ಲಿಂಗೈಕ್ಯರಾಗಿದ್ದುದನ್ನು ಲೇಖಕರು ಹಿಡಿದಿಟ್ಟಿರುವರು.

ಬಸವಣ್ಣನವರ ಕಾಲದಲ್ಲಿ ಅಂದರೆ ಹನ್ನೆರಡನೆಯ ಶತಮಾನದಲ್ಲಿ ಶರಣರ ದೊಡ್ಡ ದಂಡೇ ಹುಟ್ಟಿಕೊಂಡು, ಅಧ್ಯಾತ್ಮದ ಹಿರಿಮೆ ಮೆರೆದದ್ದು ಐತಿಹಾಸಿಕ ಸತ್ಯವಾಗಿದೆ. ನೂರಾರು ಶರಣ ಶರಣೆಯರು ಒಂದೆಡೆಗೆ ಸೇರಿ ಚರ್ಚಿಸಿದರು. ಹೊಸ ಧರ್ಮವನ್ನು ಹುಟ್ಟು ಹಾಕಿದರು. ಮಾನವ ಕುಲದ ಉದ್ಧಾರಕ್ಕೆ ಶ್ರಮಿಸಿದರು. ಜಾತಿ, ಮತ ಪಂಥ ಕುಲಗಳನ್ನು ಮೆಟ್ಟಿ ನಿಂತರು. ಅಂಥ ಅನೇಕ ಶರಣರಲ್ಲಿ ಶ್ರೀ ಕಾಡಸಿದ್ಧೇಶ್ವರರು ಒಬ್ಬರು. ರೇವನಸಿದ್ಧ, ಮರುಳಸಿದ್ಧ, ಸಿದ್ಧರಾಮರಂತೆ ಶ್ರೀ ಕಾಡಸಿದ್ಧೇಶ್ವರರು ಸಿದ್ಧ ಸಂಪ್ರದಾಯದವರೆಂದು ಗುರುತಿಸಲಾಗಿದೆ.

**4. ಪ್ರೊ. ಪ್ರಭುಲಿಂಗಯ್ಯಾ ಮಲ್ಲಾಪೂರ :**

ಶಿಕ್ಷಣವು ವ್ಯಾಪಾರೀಕರಣಗೊಳ್ಳುತ್ತಿರುವ ಈಗಿನ ಕಾಲದಲ್ಲಿ, ಶಿಕ್ಷಣವು ತನ್ನ ಮೂಲ ಮೌಲ್ಯವನ್ನು ಕಳೆದುಕೊಳ್ಳುತ್ತಿದೆ. ಶಿಕ್ಷಕರು ಕೂಡ ತಮ್ಮ ಕರ್ತವ್ಯವನ್ನು ಮರೆತು ಬೇರೆ ಕೆಲಸಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಾರೆ. ಗುರು ಶಿಷ್ಯರ ಮಧುರ ಬಾಂಧವ್ಯ ಕಳಚಿಕೊಂಡಿದೆ. ಕೇವಲ ನೌಕರಿಗಾಗಿ ವಿದ್ಯಾಭ್ಯಾಸವಾದರೆ; ಹೊಟ್ಟೆ ಹೊರೆಯಲು ಮಾತ್ರ ಶಿಕ್ಷಕ ವೃತ್ತಿ ಎಂಬ ಭಾವನೆ ಜನರಲ್ಲಿ ಮೂಡಿದೆ. ಜ್ಞಾನ ಸಂಪಾದನೆಯೇ ಶಿಕ್ಷಣದ ಮುಖ್ಯ ಗುರಿಯೆಂಬುದು ಮರೆತು ಹೋಗಿದೆ. ಶಿಕ್ಷಣವು ಮನುಷ್ಯನನ್ನು ವಿನಯವಂತನನ್ನಾಗಿಸುವುದು ಬುದ್ಧಿವಂತನನ್ನಾಗಿಸುವುದು, ಅಲ್ಲದೆ ನಿಜವಾದ ಪರಿಪೂರ್ಣ ಮಾನವನನ್ನಾಗಿಸುವುದು. ಶಿಕ್ಷಣವು ಮನುಷ್ಯರ ಬಾಳಿಗೆ ಬೆಳಕು ನೀಡಿ, ಸುಗಮ ಸಂಸಾರಕ್ಕೆ ದಾರಿ ಮಾಡಿಕೊಡುತ್ತದೆ.

ಇಂಥ ವಿದ್ಯೆಯನ್ನು ಪಡೆಯಬೇಕಾದರೆ ಸಮರ್ಥನಾದ ಗುರು ಬೇಕು, ಮಣ್ಣಿನಿಂದ ಕುಂಬಾರ ಉಪಯುಕ್ತ ಮಡಿಕೆ ತಯಾರಿಸುವಂತೆ ; ಬಂಗಾರದಿಂದ ಅಕ್ಕಸಾಲಿಗನು ಸುಂದರವಾದ ಒಡವೆ ಮಾಡುವಂತೆ, ಗುರುವಾದವನು ಶಿಷ್ಯನನ್ನು ಜ್ಞಾನ ಸಂಪನ್ನನಾಗಿ ವಿದ್ಯೆಯ ನಿಧಿಯಾಗಿ ಪರಿವರ್ತನೆಗೊಳಿಸುವನು. ಎಲ್ಲ ದಾನಗಳಲ್ಲಿ ವಿದ್ಯಾದಾನವೇ ಶ್ರೇಷ್ಠವೆಂದು ಹೇಳಲಾಗಿದೆ. ಆದ್ದರಿಂದ ಶಿಕ್ಷಕನಾದವನು ಪ್ರಾಮಾಣಿಕ ಸೇವೆಯಿಂದ ಸಮರ್ಪಣ ಭಾವನೆಯಿಂದ

ಕಾರ್ಯವೆಸಗಬೇಕು. ಇಂಥ ಶಿಕ್ಷಕರು ಸಿಗುವುದು ದುರ್ಲಭ ಈ ತೆರನ ಗುಣಸ್ವಭಾವ ಹೊಂದಿದ ಅನೇಕ ಶಿಕ್ಷಕರು ಕಲಬುರ್ಗಿಯಲ್ಲಿ ಆಗಿ ಹೋಗಿದ್ದಾರೆ ಎಂಬುದೇ ಒಂದು ಸಂತಸದ ಸಂಗತಿ. ಅಂಥವರಲ್ಲಿ ಶ್ರೀ ಪ್ರಭುಲಿಂಗಯ್ಯ ಮಲ್ಲಾಪೂರರು ಕೂಡ ಒಬ್ಬರೆಂದು ಹೇಳಲು ಹೆಮ್ಮೆಯೆನಿಸುವುದು. ಇಂಥವರ ಜೀವನ ಚರಿತ್ರೆ ಓದುವುದು, ಅವರನ್ನು ಅರಿತುಕೊಳ್ಳುವುದು ಮುಂದಿನ ಪೀಳಿಗೆಗೆ ಬಹಳ ಅವಶ್ಯಕವಾಗಿದೆ. ಮತ್ತು ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ವಾಗುವುದರಲ್ಲಿ ಸಂದೇಹವಿಲ್ಲ.

ಗುಲಬರ್ಗಾದ ಶರಣಬಸವೇಶ್ವರ ಶಿಕ್ಷಣ ಸಂಸ್ಥೆಯಲ್ಲಿ ಮೂರು ದಶಕಗಳಿಗಿಂತಲೂ ಹೆಚ್ಚು ವರ್ಷ ಸೇವೆ ಸಲ್ಲಿಸಿ ಮಿದುಳು ಸ್ರಾವದಿಂದ ಕೊನೆಯುಸಿರೆಳೆದಾಗ, ಶ್ರೀ ಶರಣಬಸವೇಶ್ವರರ ಕಲಾ ಮಹಾವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಶ್ರೀ ಪ್ರಭುಲಿಂಗಯ್ಯ ಮಲ್ಲಾಪೂರ ಅವರು 52ನೇ ವರ್ಷದಲ್ಲಿ 02-03-1986 ರ ಬೆಳಿಗ್ಗೆ ಇನ್ನಿಲ್ಲವಾದರು. ಶ್ರೀಮತಿ ವೀರಮ್ಮ ಮಹೇಶ್ವರ ದಂಪತಿಗಳಿಗೆ ನಾಲ್ಕನೇಯ ಮಗನಾಗಿ ಯಲಬುರ್ಗಿ ತಾಲೂಕಿನ ಇಟಗಿಯಲ್ಲಿ ಜನಸಿದರು.

ಜೀವನದಲ್ಲಿ ಮುಂದೆ ಬರಲಿಕ್ಕೆ ಬಡತನ ಒಂದು ನೆಪವಾಗಬಾರದು. ಅದನ್ನುಮೀರಿ ಮೇಲೆ ಬರಲು ಪ್ರಯತ್ನಿಸಬೇಕು ಆತ್ಮ ಬಲವೊಂದಿದ್ದರೆ ಬಡತನದಲ್ಲಿಯೂ ಉನ್ನತ ಶಿಕ್ಷಣ ಹೊಂದಿ, ಮೇಲೆ ಬರಬಹುದೆಂಬುದನ್ನು ನಾವು ಮಲ್ಲಾಪೂರರ ಕುಟುಂಬದಿಂದ ಕಲಿತುಕೊಳ್ಳಬಹುದಾಗಿದೆ. ಗುರು ಹಿರಿಯರು ದೇವರ ಕೃಪೆಯೂ ನಮಗೆ ಬೇಕು. 'ನೀನೊಲಿದರೆ ಕೊರಡು ಕೊನರುವುದಯ್ಯ' ಎನ್ನುವ ಬಸವಣ್ಣನವರ ಮಾತು ನೆನಪಿಸಬೇಕು. ದೇವರ ಕೃಪೆ ಇದ್ದರೆ ಅಸಾಧ್ಯವಾದುದ್ದು ಸಾಧ್ಯವಾಗುವುದು. ಸತತ ಪ್ರಯತ್ನ ದೇವರಲ್ಲಿ ನಂಬಿಗೆ ಇಟ್ಟುಕೊಂಡಿರಬೇಕು. ನೌಕರಿ ಗಳಿಸಲು ಮಾತ್ರ ವಿದ್ಯೆ ಕಲಿಯಬೇಕೆಂಬುದು ತಪ್ಪು ಜ್ಞಾನ ಸಂಪಾದನೆಯೇ ನಮ್ಮ ಮೂಲ ಗುರಿಯಾಗಿರಬೇಕು. ವಿದ್ಯೆಗೆ ಕೊನೆಯೆಂಬುದೇ ಇಲ್ಲ. ಇದನ್ನು ಪ್ರಭುಲಿಂಗಯ್ಯನವರ ಚರಿತ್ರೆಯಿಂದ ತಿಳಿದುಕೊಳ್ಳಬಹುದಾಗಿದೆ.

ಬಂಧು ಪ್ರೇಮ, ಸಮಾಜದ ಬಗ್ಗೆ ಕಳಕಳಿ, ವಿದ್ಯಾರ್ಥಿಗಳ ಬಗ್ಗೆ ಕಾಳಜಿ, ಸಾಹಿತ್ಯದತ್ತ ಒಲವು ನಿಜವಾದ ಗೆಳೆತನ ಹೇಗಿರಬೇಕೆಂಬುದನ್ನು ಮಲ್ಲಾಪುರರು ತೋರಿಸಿಕೊಟ್ಟಿರುವರು. ಮುಳ್ಳುಗಳ ಮಧ್ಯದಲಿಯೇ ಸುಂದರವಾದ ಗುಲಾಬಿ ಅರಳುವಂತೆ, ಕಷ್ಟಗಳ ನಡುವೆಯೇ ಉನ್ನತ ಶಿಕ್ಷಣ ಪಡೆದು,

ಸದಾ ಹಸನ್ಮುಖದಿಂದ ಬಾಳಿದವರು ಮಲ್ಲಾಪೂರರು. ಅಲ್ಲದೆ ತಮ್ಮ ಮಕ್ಕಳಿಗೂ ಉನ್ನತ ಶಿಕ್ಷಣ ಕೊಡಿಸಿದರು. ಮಹಾನ್ ಪುರುಷರಾದವರೆಲ್ಲ ಬಡತನದಲ್ಲಿ ಬಂದು, ಚೊಕ್ಕ ಚಿನ್ನವಾಗಿ ಮೇಲೆ ಬಂದವರೆಂಬುದನ್ನು ನಾವು ಮರೆಯುವಂತಿಲ್ಲ.

ಶ್ರೀ ಪ್ರಭುಲಿಂಗಯ್ಯ ಮಲ್ಲಾಪುರ ಅವರು ನಿತ್ಯ ಸಾಹಸಿಗಳು. ಸಮಾಜ ಕುಟುಂಬಿಗಳು. ಅವರು ಒಂದು ನಿಮಿಷವೂ ವ್ಯರ್ಥ ಹೋಗುತ್ತಿರಲಿಲ್ಲ. ಮಿತ್ರರ ಸಹಾಯದಲ್ಲಾದರೂ ಇರುತ್ತಿದ್ದರು. ಸಹೋದರರ ಸಮಸ್ಯಾ ಪರಿಹಾರದಲ್ಲಾದರೂ ತೊಡಗಿಸಿಕೊಂಡಿರುತ್ತಿದ್ದರು. ತಮ್ಮ ಕಾಲೇಜಿನ ಕೆಲಸದಲ್ಲಾದರೂ ನಿರಂತರರಾಗಿರುತ್ತಿದ್ದರು. ಸಾಹಿತ್ಯ ಪ್ರಸಾರದಲ್ಲಾದರೂ ಮುಳುಗಿರುತ್ತಿದ್ದರು. ಕೊನೆಗೆ ವೀರಶೈವ ಸಮಾಜದ ಚಿಂತನೆಯನ್ನಾದರೂ ಹಚ್ಚಿಕೊಂಡು ಮನಮಗ್ನರಾಗುತ್ತಿದ್ದರು. ಸಲಹೆ ಕೇಳಿ ಬಂದವರಿಗೆ ಅವರಲ್ಲಿ ನಿರುತ್ತರ ಇರುತ್ತಿರಲಿಲ್ಲವೇ ಇಲ್ಲ.

'' ಶ್ರೀ ಮಲ್ಲಾಪುರ ಅವರು ಒಳ್ಳೆಯ ವಾಗ್ಮಿಗಳು, ಶ್ರೇಷ್ಠ ಬರಹಗಾರರು ಕೂಡ ಕಲ್ಬುರ್ಗಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಧಾನ ಕಾರ್ಯದರ್ಶಿಗಳಾಗಿಯೂ ಅಧ್ಯಕ್ಷರಾಗಿಯೂ ಯಶಸ್ವಿ ಹೊಂದಿದ್ದರು ಹಲವು ಪತ್ರಿಕೆಗಳಿಗೆ ಅನೇಕ ಲೇಖನಗಳನ್ನು ಒದಗಿಸಿದ್ದರಲ್ಲದೆ, ಒಂದೆರಡು ಗ್ರಂಥಗಳನ್ನು ಸಂಪಾದಿಸಿದ್ದರು. ಶ್ರೀ ಪ್ರಭುಲಿಂಗಯ್ಯ ಮಲ್ಲಾಪುರ ಅವರಿಲ್ಲದೆ ಕಲ್ಬರ್ಗಿಯಲ್ಲಿ ಸಾಹಿತ್ಯ ಸಾಂಸ್ಕೃತಿಕ ಚಟುವಟಿಕೆಗಳಿಲ್ಲ ಎಂಬಷ್ಟು ಅವರು ಸಮರಸಗೊಂಡಿದ್ದರು. 58ನೇ ಕನ್ನಡ ಸಾಹಿತ್ಯ ಸಮ್ಮೇಳನ ಸಿದ್ಧತೆ ನಡೆದಾಗ, ಕಾರ್ಯದರ್ಶಿಗಳಾಗಿ ಅಹರ್ನಿಶ ದುಡಿದಿದ್ದರು. ದೇವರಿಗೆ ಮೆಚ್ಚುಗೆಯಾದವರು ಬಹು ಬೇಗ ಹೋಗುತ್ತಾರೆನ್ನುವುದಕ್ಕೆ ಶ್ರೀ ಪ್ರಭುಲಿಂಗಯ್ಯನವರು ನಿದರ್ಶನವಾಗಿದ್ದಾರೆ.''[33]

---

33. ಎ.ಕೆ. ರಾಮೇಶ್ವರ - ವಿಶ್ವಕಲ್ಯಾಣ ಮಾರ್ಚ-10, 1986, ಪುಟ. ಸಂ. 20

## 7. ಆಧುನಿಕ ವಚನಗಳು :

12ನೇ ಶತಮಾನದ ಶರಣರ ಸಮಾಜ, ಧಾರ್ಮಿಕ ಚಳುವಳಿಯು ಜಾಗತಿಕ ಇತಿಹಾಸದಲ್ಲಿ ಒಂದು ಅಪೂರ್ವ ಘಟನೆಯಾಗಿದೆ. ''ವಚನ'' ಎಂದರೆ ಮಾತು. ಅದು ಎಂಥ ಮಾತೆಂದರೆ 'ಪ್ರಮಾಣ'. ವಚನವು ಸಾಹಿತ್ಯ ಪರಿಭಾಷೆಯಾಗಿ ಒಂದು ಪ್ರಕಾರದ ಕಾವ್ಯವಾಗಿದೆ. ಹಾಡಿದರೆ ಹಾಡಾಗುವ, ಓದಿದರೆ ಗದ್ಯವಾಗುವ ಕನ್ನಡದ ವಿಶಿಷ್ಟ ಕಾವ್ಯ ಪ್ರಕಾರ. ಇದು ಶರಣರ ಆಂದೋಲನಕ್ಕೆ ಮತ್ತು ಅಭಿವ್ಯಕ್ತಿಗೆ ಸಂಗಾತಿಯಾಯಿತು.

ಕನ್ನಡ ಸಾಹಿತ್ಯ ಇತಿಹಾಸದಲ್ಲಿ 12ನೇ ಶತಮಾನ ಒಂದು ಪ್ರಮುಖವಾದ ಘಟ್ಟವಾಗಿದೆ. 12ನೇ ಶತಮಾನದಲ್ಲಿ 'ವಚನ' ಎಂಬ ಹೊಸ ಸಾಹಿತ್ಯ ಹುಟ್ಟಿಕೊಂಡಿತು. ವಚನ ಸಾಹಿತ್ಯವು ಕನ್ನಡ ಸಾಹಿತ್ಯದಲ್ಲಿ ಪ್ರಭಾವಶಾಲಿಯಾಗಿ, ವಚನ ಸಾಹಿತ್ಯ ಆತ್ಮ ವಿಮರ್ಶೆಯ ಮಾಧ್ಯಮವಾಗಿ, ಸ್ವತಂತ್ರವಾಗಿ ಬೆಳೆದು ಬಂದಿದೆ. ವಚನ ಸಾಹಿತ್ಯವು ಮುಂದಿನ ಸಾಹಿತ್ಯ ಪರಂಪರೆಗಳ ಮೇಲೆ ಪ್ರಭಾವ ಬೀರಿ ಕನ್ನಡ ಸಾಹಿತ್ಯದಲ್ಲಿ ಅಷ್ಟೇ ಅಲ್ಲದೆ ವಿಶ್ವ ಸಾಹಿತ್ಯದಲ್ಲಿ ಒಂದು ಪ್ರಮುಖ ಅಂಗವಾಗಿದೆ. ಸ್ವಂತಿಕೆಯಿಂದ ಬೆಳೆದು ಬಂದ ವಚನ ಸಾಹಿತ್ಯವನ್ನು ದೇವರದಾಸಿಮಯ್ಯ, ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ ಮುಂತಾದ ಶರಣರು, ವಿವಿಧ ಕಸುಬುಗಳಲ್ಲಿ ತೊಡಗಿದವರಾಗಿದ್ದರು. ಇವರು ತಮ್ಮ ಅಭಿವ್ಯಕ್ತಿಗೆ ವಚವನ್ನು ಮುಖ್ಯ ಮಾಧ್ಯಮವನ್ನಾಗಿ ಮಾಡಿಕೊಂಡರು.

ಸಮಾಜದ ಎಲ್ಲಾ ಜಾತಿಯವರೂ ವಚನವನ್ನು ಬಳಸಿ, ತಮ್ಮ ಅನುಭವ, ಅನಿಸಿಕೆಗಳನ್ನು ವಚನಗಳ ಮೂಲಕ ಹೇಳತೊಡಗಿದರು. ಆದ್ದರಿಂದ ವಚನ ಒಂದು ಚಳುವಳಿಯಾಗಿಯೇ ಆಯಿತು. ಬಂಡಾಯ ಸಾಹಿತ್ಯಕ್ಕಿಂತ ಮೊದಲು ಕನ್ನಡ ನಾಡಿನಲ್ಲಿ ವಚನ ಚಳುವಳಿ ಆಯಿತೆಂದರೆ, ಅದರ ಸಾಮಾಜಿಕ ವ್ಯಾಪಕತೆ ಅಪಾರವಾದುದೆಂಬುದು ಅರಿವಿಗೆ ಬರುತ್ತದೆ.

ವಚನ ಸಾಹಿತ್ಯ ಕನ್ನಡ ಸಾಹಿತ್ಯದ ದಿಕ್ಕನ್ನೇ ಬದಲಿಸಿತು. ಅಷ್ಟೇ ಅಲ್ಲ ಭಾರತೀಯ ಸಾಹಿತ್ಯದ ದಿಕ್ಕನ್ನು ಬದಲಿಸಿತು. ಕನ್ನಡ ಭಾಷೆಗೆ ತನ್ನತನ, ಗಟ್ಟಿತನ, ಹೃದಯತನವನ್ನು ತಂದು ಕೊಟ್ಟಿತು.

'ಸರ್ವಜ್ಞ' ಕನ್ನಡದ ಜನಪದ ಕವಿ. ಜನಸಾಮಾನ್ಯರಿಂದ ಕಲಿತ ಜ್ಞಾನವನ್ನು ಜನಸಾಮಾನ್ಯರಿಗಾಗಿ ಧಾರೆಯೆರೆದ ಕವಿ. ಜನರ ಬದುಕು ಉದ್ಧಾರವಾಗಬೇಕೆಂದು ಚಿಂತನೆ ಮಾಡಿ

ಬರೆದ ಅವರ ವಚನಗಳು ಸಹ ಜಾನಪದ ಛಂದಸ್ಸಿನ ತ್ರಿಪದಿಯಲ್ಲಿ ಹುಟ್ಟಿ ಬಂದಿವೆ. ಸರ್ವಜ್ಞನ ವಚನಗಳು ಜನರ ನಾಲಿಗೆಯ ಮೇಲೆ ಈಗಲೂ ಮುಂದೆಯೂ ನಲಿದಾಡುತ್ತವೆ. ಅವನ ಪದಬಂಧ, ಲೋಕಾನುಭವ, ಜೀವನ ವಿಮರ್ಶೆ, ಹಾಸ್ಯ ತುಂಬಿದ ವಿಡಂಬನೆ ಅವನ ನಂತರದ ಅನೇಕ ಕವಿಗಳ ಮೇಲೆ ಗಾಢ ಪ್ರಭಾವವನ್ನು ಬೀರಿವೆ. ಅದರಲ್ಲಿ ಪಾಟೀಲರು ಒಬ್ಬರು. ಅವನ ದಾರಿಯಲ್ಲಿ ನಡೆಯಲು ಪ್ರೇರೆಪಿಸಿವೆ.

ವ್ಯವಹಾರ ಜ್ಞಾನ ವಿವೇಕಗಳ ಮೂರ್ತಿಯಾಗಿ ಬಾಳಿದ ಸರ್ವಜ್ಞನು ಸಮಾಜ ವೈದ್ಯನಾಗಿ ರೋಗ ಪರೀಕ್ಷೆ ಮಾಡಿದ್ದಾನೆ. ಬಿಚ್ಚು ಮಾತಿನ ಔಷಧಿಯನ್ನು ನೀಡಿದ್ದಾನೆ. ಕ್ರಾಂತಾ ಸಮ್ಮತಿಯಿಂದ ಉಪದೇಶವನ್ನು ಮಾಡಿದ್ದಾನೆ.

ಕನ್ನಡದಲ್ಲಿ ಹೊಸ ಕವಿಗಳೊಬ್ಬರು ಮೊಗದೋರಿದಾಗ ಹೊಸಗನ್ನಡ ಕವಿತೆಯ ಹೆದ್ದೊರೆಗೆ ಹೊಸ ಹಳ್ಳವೊಂದು ಬಂದು ಕೂಡಿದುದ್ದನ್ನು ನೋಡಿದಂತಹ ಅನುಭವ ಆಗುತ್ತದೆ. ಆದುದರಿಂದ ಆನಂದದಿಂದ ಹೊಸ ಕವಿಗಳನ್ನು ತೆರೆದ ತೋಳುಗಳೊಡನೆ ಸ್ವಾಗತಿಸಬೇಕು. ಹೈದರಾಬಾದ ಕರ್ನಾಟಕದ ಹೊಸ ಕವಿ ಶ್ರೀ ಸಿದ್ದರಾಮ ಪೋಲಿಸ ಪಾಟೀಲರು.

ಆಧುನಿಕ ವಚನಕಾರರಾದ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ,ಸತ್ಯಜ್ಞನ ವಚನಗಳು ಮೂರು ಭಾಗದಲ್ಲಿ ಬರೆದಿದ್ದಾರೆ. ಅವುಗಳೆಂದರೆ

1. ಸತ್ಯಜ್ಞನ ವಚನಗಳು - ಭಾಗ-1
2. ಸತ್ಯಜ್ಞನ ವಚನಗಳು - ಭಾಗ -2
3. ಸತ್ಯಜ್ಞನ ವಚನಗಳು - ಭಾಗ-3

## 1. ಸತ್ಯಜ್ಞನ ವಚನಗಳು :

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಹೆಚ್ಚಾಗಿ ಸತ್ಯವನ್ನೇ ನಂಬಿಕೊಂಡವರಾಗಿದ್ದರಿಂದ ಅವರು ಬರೆದ ತ್ರಿಪದಿಗೆ 'ಸತ್ಯಜ್ಞ' ಎಂದು ಹೆಸರು ಇಟ್ಟಿದ್ದಾರೆ. ನಿತ್ಯ ಜೀವನದಲ್ಲಿ ಅವರು ಪ್ರತ್ಯಕ್ಷ ಕಂಡುಂಡ ಅನುಭವಗಳನ್ನು ಹಾಗೂ ಹಲವರ ಬಾಯಿಂದ ಕೇಳಿ ತಿಳಿದ ನಿಜಸಂಗತಿಗಳನ್ನು ಈ ವಚನಗಳಲ್ಲಿ ಯಾವ ಮುಚ್ಚು ಮರೆಯಿಲ್ಲದೆ ಬಿಚ್ಚಿ ಇಟ್ಟಿದ್ದಾರೆ. ಸಮಾಜದಲ್ಲಿ ಸಾಮಾನ್ಯವಾಗಿ ಕಂಡು ಬರುವ ಕುಂದು ಕೊರತೆಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾರೆ. ಕಟು ಸತ್ಯ ಯಾವಾಗಲೂ

ಕಹಿಯಾದದ್ದು. ಕಹಿ ಔಷಧವೇ ರೋಗ ನಿವಾರಣೆಗೆ ಮೂಲ, ಅಂದ ಮೇಲೆ ಹಿಂಜರಿತವೇಕೆ? ಎನ್ನುತ್ತಾರೆ ಕವಿಗಳು.

ಇದರಲ್ಲಿ ಬರುವ ಅನೇಕ ಟೀಕೆ, ನಿಂದನೆಗಳು ಯಾವುದೇ ಒಬ್ಬ ವ್ಯಕ್ತಿಯನ್ನು ಕುರಿತು ಬರೆದವುಗಳಲ್ಲ. ವೈಯುಕ್ತಿಕ ವಾಗಿಯಾಗಲಿ, ಯಾವ ಜಾತಿ ಪಂಗಡಗಳ ದೂಷಣೆಯೆಂದಾಗಲಿ ಭಾವಿಸಬಾರದು ಎಂದು ಕವಿಯ ಅಭಿಪ್ರಾಯವಾಗಿದೆ.

''ಸಾಹಿತ್ಯವು ಸಮಾಜದ ಕನ್ನಡಿ'' ಮನುಷ್ಯ ಸಮಾಜ ಜೀವಿ. ಸಮಾಜ ಬಿಟ್ಟು ಬದುಕಲು ಸಾಧ್ಯವಿಲ್ಲ. ಸಮಾಜ ಸುಸ್ಥಿತಿಯಲ್ಲಿದ್ದಾಗ ಮನುಷ್ಯ ಸುಖವಾಗಿ ಸಂತೋಷವಾಗಿ ಇರಬಲ್ಲ. ಸಮಾಜ ಕೆಟ್ಟಾಗ ಅದರ ಪ್ರಭಾವ ಸಹಜವಾಗಿ ಸಮಾಜ ಜೀವಿಯ ಮೇಲೂ ಆಗುವದು. ನಾವು ಸಮಾಜದಲ್ಲಿ ಜೀವಿಸುವಾಗ ಸಮಾಜದ ಆಗು ಹೋಗುಗಳಿಗೆ ನಾವು ಹೊಣೆಗಾರರು. ನಾವು ಒಳ್ಳೆಯವರಾಗಿ, ಇತರರಿಗೆ ಒಳ್ಳೆಯದನ್ನು ಬಯಸುತ್ತಾ ಕೆಟ್ಟದ್ದನ್ನು ಕಂಡಾಗ ಪ್ರತಿಭಟಿಸುತ್ತಿದ್ದರೆ ಅದೇ ನಾವು ಸಮಾಜಕ್ಕೆ ಕೊಡುವ ಉನ್ನತ ಕೊಡುಗೆ. ಕಂಡೂ ಕಾಣದಂತೆ ನಿರ್ಲಕ್ಷ್ಯದಿಂದ ನಾನೊಬ್ಬ ಮಾತ್ರ ಬದುಕಿದರೆ ಸಾಕು, ಉಳಿದವರು ಏನಾಧರೇನು? ಎಂಬ ಸ್ವಾರ್ಥ ಭಾವನೆ ಬೆಳೆಸಿಕೊಂಡರೆ, ಅದು ಅಪರೋಕ್ಷವಾಗಿ ಅತನಿಗೂ ಮುಳುವಾಗುವುದರಲ್ಲಿ ಸಂದೇಹವಿಲ್ಲ ಎಂದು ಪಾಟೀಲರು ತಮ್ಮ ವಚನಗಳಲ್ಲಿ ಹೇಳುತ್ತಾರೆ.

ಶ್ರೀ ಸಿದ್ಧರಾಮು ಪೋಲೀಸ ಪಾಟೀಲರು ತಮ್ಮ ಜೀವನದಲ್ಲಿ ಕಂಡುಂಡ ಕಹಿ, ಸಿಹಿ ಅನುಭವಗಳನ್ನು ತಮಗನ್ನಿಸಿದಂತೆ ತ್ರಿಪದಿಗಳಲ್ಲಿ ಹಿಡಿದಿಟ್ಟಿರುತ್ತಾರೆ. ಸಾಮಾನ್ಯ ಜನರಿಗೂ ತಿಳಿಯುವಂತಾಗಲೆಂದೇ ಸರಳ ಮಾತಿನಲ್ಲಿ, ಜನಪದ ನುಡಿಯಲ್ಲಿ ವಿಷಯವನ್ನು ಪ್ರತಿಪಾದಿಸಿದ್ದಾರೆ. ಪ್ರತಿಯೊಬ್ಬನ ನಾಲಿಗೆಯ ಮೇಲೆ ಈಗಲೂ ನಲಿದಾಡುವ ಸರ್ವಜ್ಞ ಕವಿಯ ವಚನಗಳ ಪ್ರಭಾವ, ಪಾಟೀಲರ ಮೇಲೆ ಚಿಕ್ಕವನಿರುವಾಗಿನಿಂದಲೇ ಬಿದ್ದಿದೆ. ಹೀಗಾಗಿ ಅದೇ ಧಾಟಿಯಲ್ಲಿ, ಅದೇ ಜಾಡಿನಲ್ಲಿ ಪ್ರಚಲಿತ ವಿಷಯಗಳನ್ನು ಜನಸಾಮಾನ್ಯರಿಗೆ ಮುಟ್ಟಿಸಬೇಕೆಂಬ ಹಂಬಲದಿಂದ 1962 ರಿಂದಲೂ 'ಸತ್ಯಜ್ಞ'ನೆಂಬ ಅಂಕಿತದಲ್ಲಿ ಬರೆಯಲು ಪ್ರಾಂಭಿಸಿದ್ದಾರೆ. ಸಮಾಜದ ಓರೆ ಕೋರೆಗಳನ್ನು ಎತ್ತಿ ತೋರಿಸಿದ ಮಾತ್ರಕ್ಕೆ ಸಮಾಜ ಸುಧಾರಣೆಗೊಳ್ಳುವಿದೆಂಬ ಮಾತು ಸರಿಯಲ್ಲ. ಪ್ರತಿಯೊಬ್ಬನೂ ಸಮಾಜಕ್ಕೆ ತಾನು ಕೊಡಬೇಕಾದ ಕೊಡುಗೆ ಕರ್ತವ್ಯ ಏನು?

ಎಂಬುದನ್ನು ತಿಳಿಯಬೇಕು. ಈ ಪ್ರಕಾರ ಮನುಷ್ಯನು ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿದು, ತಾನೂ ಬದುಕುತ್ತಾ, ಇತರರನ್ನೂ ಬದುಕಿಸುತ್ತಾ ಬಾಳುವುದನ್ನು ಕಲಿಯಬೇಕು. ಇಂಥ ಒಂದು ಪ್ರಯತ್ನ ಇಲ್ಲಿ ಮಾಡಲಾಗಿದೆ. ಇದರ ಪ್ರತಿಫಲವೇ ಈ ''ಸತ್ಯಜ್ಞ''ನ ವಚನಗಳು. ಎಲ್ಲರೂ ಇದನ್ನು ಓದಿ ಮನನ ಮಾಡಿಕೊಂಡರೆ, ಕವಿಯ ಅನುಭವಗಳನ್ನು ಹಂಚಿಕೊಂಡಾಗ ಮಾತ್ರ ಶ್ರಮ ಸಾರ್ಥಕವಾಗುತ್ತದೆ.

'ಸತ್ಯಜ್ಞ' ಅಂಕಿತದಲ್ಲಿ ವಚನಗಳನ್ನು ಬರೆದಿರುವ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಸರ್ವಜ್ಞನಿಂದ ಪ್ರೇರಣೆ ಪಡೆದ ಕವಿಗಳಲ್ಲಿ ಒಬ್ಬರಾಗಿದ್ದಾರೆ.

'' ಗಂಡುಗಲಿ ಸರ್ವಜ್ಞ ! ಉಂಡು ಅರಗಿಸಿಕೊಂಡ !
ತುಂಡು ತ್ರಿಪದಿಗೆ ನಾ ಗಂಟು ಬಿದ್ದಿರುವೆ !
ಕಂಡರಿಯೆ ಮುಂದೆ । ಸತ್ಯಜ್ಞ ॥''[34]

''ಆಗಿನಾ ಕಾಲದ । ಆಗು ಹೋಗುಗಳ ತಾ ।
ಹ್ಯಾಗೆ ಕಂಡಂತೆ ಉಸುರಿದನೊ ಸರ್ವಜ್ಞ ?
ಹಾಗೆ ನಾನಿಂದು ॥ ಸತ್ಯಜ್ಞ॥''[35]

ಎಂದು ''ಸತ್ಯಜ್ಞ'' ರು ಸರ್ವಜ್ಞನಾಗಿದ್ದು, ಅಂದು 16ನೇಯ ಶತಮಾನದಲ್ಲಿ ಮಾಡಿದ ಕಾರ್ಯವನ್ನು ಇಂದು 20ನೇ ಶತಮಾನದಲ್ಲಿ ಮಾಡಿರುವುದಾಗಿ ಪಾಟೀಲರು ಹೇಳಿಕೊಂಡಿದ್ದಾರೆ. 'ಸತ್ಯಜ್ಞ'ರು ಬರೆದ ತ್ರಿಪದಿಗಳನ್ನು ಓದುತ್ತಿರುವಾಗಲೆಲ್ಲ ಸರ್ವಜ್ಞನ ವಚನಗಳ ಅನುಭವವಾಗುತ್ತದೆ.

'ಸತ್ಯಜ್ಞ'ರು ಹೀಗೆ ತಮ್ಮನ್ನು 'ಸರ್ವಜ್ಞ'ನಿಗೆ ಹೋಲಿಸಿಕೊಳ್ಳುವಲ್ಲಿ ತೋರಿದ ವಿನಯ ಮೆಚ್ಚತಕ್ಕದಾಗಿದೆ.

''ತಿರುಗಿ ತಾ ಊರೂರು । ತಿರುಪೆ ಬೇಡುತ ನಿತ್ಯ।
ಬರೆದ ಖಂಡಿತನ ಧೈರ್ಯ ನನಗೆಲ್ಲ ? ನಾ
ಬರೆದೆ ಬಂದಂತೆ ಸತ್ಯಜ್ಞ॥''[36]

ಹೀಗೆ 'ಸರ್ವಜ್ಞ'ನ ಮಾರ್ಗದಲ್ಲಿ ಗಮನಿಸಿದ ಸತ್ಯಜ್ಞರು ಅತ್ಯುತ್ತಮ ತ್ರಿಪದಿಗಳನ್ನು ರಚಿಸಿದ್ದಾರೆ. ಇದನ್ನು ನಿಸ್ಸಂಶಯವಾಗಿ ಹೇಳಬಹುದು. ಸತ್ಯದಿಂದ ತುಂಬಿದ ಸತ್ಯಜ್ಞರ ಈ ವಚನ

---

34 ಸತ್ಯಜ್ಞನ ವಚನಗಳು - ಭಾಗ-2, ವೈಯಕ್ತಿಕ-16, ಪುಟ. ಸಂ. 03
35. ಸತ್ಯಜ್ಞನ ವಚನಗಳು - ಭಾಗ-2, ವೈಯಕ್ತಿಕ-17, ಪುಟ. ಸಂ. 04
36. ಸತ್ಯಜ್ಞನ ವಚನಗಳು - ಭಾಗ-2, ವೈಯಕ್ತಿಕ-22, ಪುಟ. ಸಂ. 04

ಸಂಗ್ರಹಕ್ಕೆ ಪ್ರೊ. ಎಸ್. ಆರ್. ಗುಂಜಾಳ ಅವರು ಮುನ್ನುಡಿ ಬರೆಯುವುದಕ್ಕೆ ಮುಜುಗರ ಪಟ್ಟು ಬಂಗಾರಕ್ಕೆ 'ಚಿನ್ನ' ವೆಂಬ ಮತ್ತೊಂದು ಶಬ್ದದಿಂದ ಅರ್ಥೈಸಿದಂತೆ ಪಾಟೀಲರು ಮುನ್ನುಡಿ 'ಸತ್ಯಜ್ಞ'ರೇ ಹೇಳಿದ ಕೆಳಗಿನ ವಚನ ಪಾಟೀಲರ ಮಾತಿಗೆ ಪುಷ್ಠಿಯನ್ನು ಕೊಡುತ್ತದೆ.

''ಹಿರಿಯ ಸಾಹಿತಿಗಳಿಗೆ । ಬರೆಯಲಿಕ್ಕೆ ಮುನ್ನುಡಿಯ।
ಅರೆ ಘಳಿಗೆ ಬಿಡುವು ಇಲ್ಲದಿರೆ ಇಂಥವರ
ತೊರೆಯಬೇಕೀಗ ।। ಸತ್ಯಜ್ಞ ।।''[37]

ಸತ್ಯಜ್ಞರ ಈ ಮಾತು ಇಂದು ಸಾಹಿತ್ಯ ಲೋಕದಲ್ಲಿ ಎದ್ದು ಕಾಣುತ್ತಿರುವ ಸಂಗತಿಯಾಗಿದೆ. ಅನೇಕ ಹಿರಿಯ ಸಾಹಿತಿಗಳು, ಕಿರಿಯ ಸಾಹಿತಿಗಳ ಗ್ರಂಥಗಳಿಗೆ ಮುನ್ನುಡಿಯನ್ನು ಬರೆದು, ಬೆನ್ನು ಚಪ್ಪರಿಸುವುದಕ್ಕೆ ಮುಂದೆ ಬರುವದಿಲ್ಲ. ಮುನ್ನುಡಿ ಬರೆಯುವಷ್ಟು ಪುರುಸೊತ್ತಿಲ್ಲ ಎಂದು ಮೊದಲೇ ಹೇಳಿದರೆ ಲೇಖಕನಿಗೆ ತೊಂದರೆಯಾಗುವುದಿಲ್ಲ. ಆದರೆ ಮುನ್ನುಡಿ ಬರೆದುಕೊಡುತ್ತೇನೆಂದು ಒಪ್ಪಿ, ಪ್ರಿಂಟಾದ ಪತ್ಯ ಭಾಗವನ್ನು ತೆಗೆದುಕೊಂಡು ''ಆಗ ಬಾ, ಈಗ ಬಾ, ಹೋಗಿ ಬಾ ಎಂದು ಲೇಖಕರನ್ನು ಸತಾಯಿಸಿ, ಕೊನೆಗೂ ಮುನ್ನುಡಿಯನ್ನು ಬರೆದು ಕೊಡದ ಹಿರಿಯ ಸಾಹಿತಿಗಳಿಗೆ ಮೇಲಿನ ಸತ್ಯಜ್ಞರ ತ್ರಿಪದಿ ಸರಿಯಾಗಿ ತೋರುತ್ತದೆ. ಅದಕ್ಕಂತೆಯೇ ಸತ್ಯಜ್ಞರು ಕೆಳಗಿನ ಎರಡು ವಚನಗಳಲ್ಲಿ ತಮ್ಮ ಲೋಕಾನುಭವನ್ನು ತುಂಬಿದ್ದಾರೆ.

'' ಮುನ್ನುಡಿಯು ಇಲ್ಲದಿರೆ । ಉನ್ನತದ ಕೃತಿ ತಾನು ।
ಇನ್ನಿರದೆ ಮೂಲೆ ಸೇರುವುದೇ ? ಸತ್ವವಿರೆ
ಮನ್ನಿಪರು ಎಲ್ಲ ।। ಸತ್ಯಜ್ಞ।।''[38]

''ನಿನ್ನ ಯೋಗ್ಯತೆಯಿರಲು । ಮುನ್ನುಡಿಯು ಬೇಕೇಕೆ ?
ಇನ್ನೊಬ್ರ ಆಸರೆ ಬಯಸದಲೆ ನೀನು
ಮುನ್ನುಗ್ಗು ಸತತ ।। ಸತ್ಯಜ್ಞ ।।''[39]

ಸತ್ಯಜ್ಞರ ವಚನಗಳಿಗೆ ಯಾರ ಪ್ರಶಂಸೆಯ ಮಾತೂ ಬೇಕಿಲ್ಲ. ಅವುಗಳನ್ನು ಸತ್ಯಜ್ಞರ ಮನಸ್ಸು ಮುದಗೊಳ್ಳುತ್ತದೆ. ಹೃದಯ ಅರಳುತ್ತದೆ; ಬದುಕು ಬಂಗಾರವಾಗುತ್ತದೆ. ಅನುಭವದ ದೃಷ್ಟಿಯಲ್ಲಿ ಹೊಳಪು ಪಡೆದ ಈ ವಚನಗಳು ಕನ್ನಡ ಸಾಹಿತ್ಯದಲ್ಲಿ ಗಟ್ಟಿಯಾಗಿ ನಿಲ್ಲಬಲ್ಲವುಗಳಾಗಿವೆ.

ಸತ್ಯಜ್ಞನ ವಚನಗಳಲ್ಲಿ 'ಅನುಭವ' ಪ್ರಧಾನವಾಗಿದೆ. ಯಂತ್ರಜ್ಞರಾಗಿ ಕೆಲಸಕ್ಕೆ ಸೇರಿರುವ ಇವರಿಗೆ ತಮ್ಮ ಅನುಭವದ ಕ್ಷಿತಿಜಗಳನ್ನು ವಿಸ್ತರಿಸಿಕೊಳ್ಳುವ ಅವಕಾಶಗಳು ಧಾರಳವಾಗಿ ದೊರೆತಿವೆ.

---

37. ಸತ್ಯಜ್ಞನ ವಚನಗಳು - ಭಾಗ-2, ಸಾಹಿತ್ಯ ಶಿಕ್ಷಣ -1, ಪುಟ. ಸಂ. 15
38. ಸತ್ಯಜ್ಞನ ವಚನಗಳು - ಭಾಗ-2, ಸಾಹಿತ್ಯ ಶಿಕ್ಷಣ -2, ಪುಟ. ಸಂ. 15
39. ಸತ್ಯಜ್ಞನ ವಚನಗಳು - ಭಾಗ-2, ಸಾಹಿತ್ಯ ಶಿಕ್ಷಣ -3, ಪುಟ. ಸಂ. 15

ಹೂವಿನಂತಹ ಮನಸು ಪಡೆದ ಈ ಭಾವಜೀವಿ ಪರಿಸರಗಳಿಗೆ ಪ್ರತಿಸ್ಪಂದಿಸುತ್ತ ಘಟನೆಗಳಿಗೆ ಪ್ರತಿಕ್ರಿಯಿಸುತ್ತ ಆಗು ಹೋಗುಗಳ ಬಗ್ಗೆ ಆಲೋಚಿಸುತ್ತ ನಡೆದಂತೆ ಅವರ ಅನುಭವವೂ ಶ್ರೀಮಂತವಾಗುತ್ತ ನಡೆದಿದೆ. ಅನುಭವಿಯ ವೇದವೇ ವೇದವೆಂದು ಸಾರಿದ ತ್ರಿಪದಿಯ ತ್ರೀವಿಕ್ರಮ ಸರ್ವಜ್ಞನ ಜಾಡು ಹಿಡಿದು ತಮ್ಮ ಅನುಭವವನ್ನು ತಮ್ಮದೇ ಆ ತ್ರಿಪದಿಗಳಲ್ಲಿ ಎರಕ ಹೊಯ್ದಿದ್ದಾರೆ ಶ್ರೀ ಸಿದ್ಧರಾಮರು.

ಸೂಕ್ಷ್ಮ ದೃಷ್ಟಿಯಿಂದ ಸುತ್ತ ಮುತ್ತಲೂ ಹಗಲು ರಾತ್ರಿಯನ್ನದೆ ಸಮಾಜದಲ್ಲಿ ನಡೆಯುತ್ತಿರುವುದನ್ನು ನೋಡುತ್ತ ನಡೆದಿರುವ ಶ್ರೀ ಸಿದ್ಧರಾಮರಿಗೆ ಬೆಳಕು ಕಂಡಂತೆ ಹುಳುಕೂ ಕಂಡಿದೆ. ಕಂಡದ್ದನ್ನು ಕಂಡಂತೆ ವಚನಗಳನ್ನು ರಚಿಸಿದ್ದಾರೆ. ಲೋಕ ಮಿಡಿದಂತೆ ನುಡಿದ ಇವರ ಹೃದಯ ವೀಣೆಯು ಹೊಮ್ಮಿಸಿದ ಇಂಚರಗಳಾಗಿ ಈ ತ್ರಿಪದಿಗಳು ಮೈದಾಳಿವೆ.

'' ಎಲ್ಲ ಸ್ವರಗಳೂ ಇಂಚರಗಳಾಗಿರುವುದು ಸಾಧ್ಯವಿಲ್ಲ. ಆಗಾಗ ಅಪಸ್ವರ ಅನಿವಾರ್ಯ ಈ ತ್ರಿಪದಿಗಳಿಗೂ ಈ ಸಾಮಾನ್ಯ ನಿಯಮಕ್ಕೆ ಅಪವಾದವಾಗುವವೆಂಬ ಪಂಥ ತೊಟ್ಟಿಲ್ಲ. ಆಡುವಾ ಭಾಷೆಯಲಿ ಹಾಡಿದ ಈ ಹಾಡುಗಳಲ್ಲಿ ಅಲ್ಲಲ್ಲಿ ಅಭಿವ್ಯಕ್ತಿ ನಿಚ್ಚಳವಾಗದೆ ಉಳಿದುದುಂಟು ; ಅನುಭವದ ಗಾಢತೆಯ, ಸಾಂದ್ರತೆಯ, ಅನನ್ಯತೆಯ ಕೊರತೆಯುಂಟು, ಅನ್ಯದೇಶ್ಯ ಶಬ್ದಗಳನ್ನು ಸಮುಚಿತವಾಗಿ ಬಳಸಿಕೊಂಡು ಆಹ್ಲಾದಕರ ಉದಾಹಣೆಗಳೊಡನೆ ದೇಶಿಯನ್ನು ಸಮುಚಿತವಾಗಿ ಬೆಳೆಸಿಕೊಂಡ ಉದಾಹರಣೆಗಳೂ ಉಂಟು. ಆದರೆ ಹೆಚ್ಚಿನ ತ್ರಿಪದಿಗಳು ಹೃದ್ಯವಾಗಿವೆ; ಅನುಭವಕ್ಕೆ ಆಕಾರ ನೀಡುವಲ್ಲಿ ಯಶಸ್ವಿಯಾಗಿವೆ ; ಅಲ್ಲಲ್ಲಿ ಅತೀವ ಮನೋಹರವಾಗಿವೆ.''[40] ಇಲ್ಲಿ ನೋಡಿದಾಗ,

> '' ಮಗುವಿನಾ ಕೈಲೊಂದು ಮಗದೊಂದುಮಗುಬೊಂಬೆ !
> ಮೊಗವೆರಡು ಮುದ್ದು ಚಂದ್ರಕಳೆ; ಬೇರ್ಪಡಿಸಿ
> ತೆಗೆಯಲಾದಿತೆ ? ಸತ್ಯಜ್ಞ''[41]

ಕರುಳಿನ ಸಂಬಂಧಗಳ ಬಗ್ಗೆ ಬರೆದ ಪಾಟೀಲರ ವಚನಗಳಲ್ಲಿ ಈ ಮನೋಹರತೆ ಒಳಗೊಂಡಿದೆ. ಇದು ಸಹಜವಾಗಿ ಹಾಸ್ಯದಿಂದ ಕೂಡಿದ ಮಿಶ್ರಿತ ವಿಡಂಬನೆಯೂ ಅಲ್ಲಲ್ಲಿ ಕಾಣುತ್ತದೆ.

40. ಸತ್ಯಜ್ಞನ ವಚನಗಳು - ಭಾಗ-1, ಸಿದ್ದಯ್ಯ ಪುರಾಣಿಕ ಅವರ ಮುನ್ನುಡಿಯಿಂದ.
41. ಸತ್ಯಜ್ಞನ ವಚನಗಳು - ಭಾಗ-1, ವಚನ -329, ಪುಟ. ಸಂ. 47

" ಕೂಲಿ ಕೆಲಸವು ಸಿಗದೆ ಬಾಳುವುದು ಬಿಗಿಯಾಗಿ
ಕೂಳಿಲ್ದೆ ಹಸಿದು, ಕಂಗೆಟ್ಟು ಹೆಂಗಸರ
ತಾಳಿ ಮಾರಿದರು ! ಸತ್ಯಜ್ಞ "[42]

ಕಲಬುರ್ಗಿಯ ಭೀಕರ ಬರಗಾಲವನ್ನು ಪಾಟೀಲರ, ತ್ರಿಪದಿ ವಚನಗಳಲ್ಲಿ ಮನವನ್ನು ಕರಗಿಸುವ, ಕೆಲವು ಹೃದಯ ವಿದ್ರಾಯಕ ಚಿತ್ರಗಳನ್ನು ಬರೆದಿದ್ದಾರೆ. ಈ ಘಟನೆಗಳು ಕಾಗದ ಪತ್ರಗಳಲ್ಲಿ ವರದಿಯಾಗಿ ಮುಂದೆ ಮರೆತು ಹೋಗಬಹುದು. ಕೂಲಿಕಾರರಿಗೆ ಕೂಲಿ ಕೆಲಸ ಸಿಗದೇ, ಹೊಟ್ಟೆ ಪಾಡಿಗಾಗಿ ಬಹಳ ಕಷ್ಟಪಡಬೇಕಾಯಿತು. ಹಸಿವು ತಾಳಲಾರದೇ, ತಮ್ಮ ಹೆಂಗಸರ ತಾಳಿ ಮಾರಿದರು. ಪಾಟೀಲರ ವಚನಗಳಿಂದ ಈ ಘಟನೆ ಮರೆಯಲಾಗದೆ ಉಳಿಸಿಕೊಂಡು ಬಂದಿದೆ.

ವಸ್ತು ವೈವಿಧ್ಯ ತ್ರಿಪದಿಯ ವೈಶಿಷ್ಟ್ಯವೆಂದೇ ಹೇಳಬಹುದು. ತ್ರಿಪದಿಗೆ ವಸ್ತುವಾಗದಿರುವ ವಿಷಯವೇ ಇಲ್ಲವೆಂದರೂ ಸಲ್ಲುವುದು. ಈ ಸಂಗ್ರಹದಲ್ಲಿ ಸೇರ್ಪಡೆಯಾಗಿರುವ ತ್ರಿಪದಿಗಳಲ್ಲಿ ಸಾಕಷ್ಟು ವಿಷಯ ವೈವಿಧ್ಯವಿದೆ. ನಮ್ಮ ಕಣ್ಮುಂದೆ ಬದುಕು ಬದಲಾಗುತ್ತಾ ನಡೆದಿದೆ; ಬರವಣಿಗೆಯ ಬಗೆ, ಉದ್ದೇಶಗಳು ಬದಲಾಗುತ್ತ ನಡೆದಿವೆ. ಬರೆದುದು ಅಚ್ಚಾಗುತ್ತಿರುವಂತೆ, ಅದು ಹಳೆಯದೆನಿಸುವ ಕಾಲವಿದು. ಈಗ ನಾಲ್ಕು ಕಾಲ ನಿಲ್ಲಬಲ್ಲದನ್ನು ಬರೆಯುವುದು ಅದೆಷ್ಟು ಕಠಿನವಾದುದೆಂಬುದು ಬರೆಯುವವರಿಗೂ ಗೊತ್ತು. ಓದುವವರಿಗೂ ಗೊತ್ತು. ಆದರೆ ನಿಜವಾದ ಅನುಭವ ಸಹಜವಾಗಿ ಪಡೆದಾಗ ಬದಲಾವಣೆಯ ಬಿರುಗಾಳಿಯಲ್ಲಿಯೂ ಮರದಂತೆ ಮುರಿದು ಬೀಳದೆ, ಹುಲ್ಲು ಕಡ್ಡಿಯಾಗಿ ಉಳಿಯಬಲ್ಲದು.

ಹೋಳಿಗೆಯನ್ನು ಕುರಿತ ಈ ತ್ರಿಪದಿಯನ್ನು ನೋಡಿದಾಗ

" ತನ್ನ ಊಟಕ್ಕೊಂದು, ಅನ್ಯರಿಗೆ ಮತ್ತೊಂದು
ಇನ್ನೊಂದು ಗಾತ್ರ ದೇವರಿಗೆ, ಹೋಳಿಗೆಯ
ಭಿನ್ನ ಆಕಾರ ॥ ಸತ್ಯಜ್ಞ ॥"[43]

ಇದನ್ನು ಮುಂದಿನ ಶತಮಾನದವರೂ ಓದಿ ಮೆಚ್ಚಬಹುದಾಗಿದೆ. ಇಂಥ ಮೆಚ್ಚಬಹುದಾದ ತ್ರಿಪದಿಗಳು ಸಾಕಷ್ಟಿವೆ. ಈ ಸಂಗ್ರಹದಲ್ಲಿ ಸಧ್ಯದ ಸಂದರ್ಭದಲ್ಲಿ ಅನಿವಾರ್ಯವಾಗಿ ಉದ್ಭವಿಸಿರುವ ಒಂದು ಸಮಸ್ಯೆಯ ಈ ಚಿತ್ರಣವನ್ನು ನೋಡಿರಿ ;

" ನೀಟಾಗಿ ಕೂಡಿಟ್ಟ ನೋಟುಗಳ ಕಟ್ಟನ್ನು ;
ನೋಟುಗಳ ರದ್ದತಿಯ ಕೇಳುತಲೆ ಇವನ
ಹಾರ್ಟು ಫೇಲೆಂದ, ಸತ್ಯಜ್ಞ ! "[44]

---

42. ಸತ್ಯಜ್ಞನ ವಚನಗಳು - ಭಾಗ-1, ವಚನಗಳು -435, ಪುಟ. ಸಂ. 63
43. ಸತ್ಯಜ್ಞನ ವಚನಗಳು - ಭಾಗ-1, ವಚನ-16, ಪುಟ. ಸಂ. 03
44. ಸತ್ಯಜ್ಞನ ವಚನಗಳು - ಭಾಗ-1, ವಚನ-212, ಪುಟ. ಸಂ. 31

ಇದು ಸಮಾಜದಲ್ಲಿ ಸದಾ ನಡೆಯುತ್ತಲೇ ಇರುವ ಸ್ಥಿತ್ಯಂತರಗಳು, ಯಾವ ಕಾಲದಲ್ಲಿಯೂ ಇರುವ ಓರೆ ಕೋರೆಗಳನ್ನು ಮನುಷ್ಯನ ಸ್ವಭಾವದ ಸಾವಿರ ಸಾವಿರ ಮುಖಗಳನ್ನು, ಜೀವನದ ವಿರಾಟ ಸ್ವರೂಪವನ್ನು ಎಷ್ಟು ಬಗೆಯಿಂದ ವೀಕ್ಷಿಸಿ, ಎಷ್ಟು ಜನರು ಬರೆದರೂ ಸಾಲದು. ಆದರೆ ಶ್ರೀ ಸಿದ್ಧರಾಮರು ಈ ಕಾರ್ಯವನ್ನು ಮಾಡಿದ್ದಾರೆ.

ಲೋಕ ಜೀವನದ ಅಗಣಿತ ರಂಗಗಳಲ್ಲಿ ಕಾಣುವ ದೋಷಗಳನ್ನು ಕವಿ ಹೃದಯ ಮಾರ್ಮಿಕವಾಗಿ, ಮೊನಚಾಗಿ ಕಿರುನುಡಿಗಳಲ್ಲಿ ಹಿಡಿದಿದ್ದಾರೆ. ಇಲ್ಲಿ ವಿಡಂಬನೆಯ ಹಿಂದೆ ಜೀವನದ ಉನ್ನತಿಕೆಯನ್ನು ಬಯಸುವ ಕವಿಯ ಭಾವವು ಶೃತಿ ಹಿಡಿದಿರುವುದನ್ನು ಕೇಳಬಹುದು. ಇದು ಲೋಕದ ಜನರು ಜೀವನ ಬಯಸುವ ದೊಡ್ಡ ಆಸೆಯಾಗಿದೆ.

ಸತ್ಯಜ್ಞನ ವಚನಗಳಲ್ಲಿ ಬಹುಪಾಲು ವಚನಗಳು ಸರಳ ಸುಂದರ ಅತ್ಯಂತ ಸಹಜವಾಗಿ ಮೂಡಿ ಬಂದಿವೆ. ಕೆಲವು ನುಡಿಗಳಂತೂ ನಿತ್ಯ ಸತ್ಯವನ್ನು ಸೊಗಸಾಗಿ ತುಂಬಿಕೊಂಡು ನಿಂತು ಶಾಶ್ವತವಾಗಿ ಬದುಕುವ ಶಕ್ತಿ ಪಡೆದುಕೊಂಡಿವೆ.

ಪಾಟೀಲರ ತ್ರಿಪದಿ ವಚನಗಳ ಶೈಲಿಯೆಂದರೆ, ಲೋಕ ಜನರ ವಿಡಂಬನೆಯನ್ನು ಮೊನಚಾಗಿ ಮಾರ್ಮಿಕವಾಗಿ, ಕಡಿಮೆ ಹಾಗೂ ಬೇರೆ ಶಬ್ದಗಳಲ್ಲಿ ಹಿಡಿದಿಡುವುದು.

ಸತ್ಯಜ್ಞನ ವಚನಗಳು ಸಿದ್ಧರಾಮ ಪೋಲೀಸ ಪಾಟೀಲರು ಬರೆದಿರುವ ತ್ರಿಪದಿ ಕಾವ್ಯ. ಕವಿ ಸಿದ್ಧರಾಮರ ವ್ಯಕ್ತಿ ಚಿತ್ರಣ ಈ ಕಾವ್ಯದಲ್ಲಿ ಒಳಪದರಾಗಿ ಮೂಡಿ ಬಂದಿದೆ. ಅವರ ಭಾವ, ಚಿಂತನಗಳು ಓದುಗರನ್ನು ಆತ್ಮ ನಿರೀಕ್ಷಣೆಗೆ ಎಳೆದು ತರುತ್ತದೆ.

ಕನ್ನಡ ಶ್ರೇಷ್ಠ ಅನುಭಾವಿ ಕವಿಗಳ ಸಾಲಿನಲ್ಲಿ ಸಿದ್ಧರಾಮ ಪೋಲೀಸ ಪಾಟೀಲರು ಒಬ್ಬರು. ಇವರು ಎದ್ದು ಕಾಣುವ ಸ್ಥಾನದಲ್ಲಿರುವರೆಂದು ನಮ್ಮ ಭಾವನೆ ಸರ್ವಜ್ಞನ ಜೊತೆ ಜೊತೆಗೂ ನಿಲ್ಲಬಲ್ಲ ಆತ್ಮಶಕ್ತಿ ಅವರಲ್ಲಿದೆ.

ಗುಟಕು ಕುಡಿದು, ಚುಟುಕು ಬರೆಯುವರೇ ಹೆಚ್ಚಿರುವ ಈ ಕಾಲದಲ್ಲಿ ತ್ರಿಪದಿಯನ್ನು ಒಲಿಸಿಕೊಂಡು ಗಣ, ಪ್ರಾಸ ಸಹಿತವಾಗಿ ಸೂಕ್ಷ್ಮ ಅವಲೋಕನದಿಂದ ವಚನ ರಚನೆಗಳಿಂದ ಸಿದ್ಧರಾಮ ಪೋಲೀಸ ಪಾಟೀಲರು ಅಭಿನಂದನಾರ್ಹರು. ನಮ್ಮ ಸಮಕಾಲೀನ ಜೀವನದ ಏರು ಪೇರುಗಳನ್ನು ಪಾಟೀಲರು ತಮ್ಮ ತ್ರಿಪದಿಗಳಲ್ಲಿ ಚೆನ್ನಾಗಿ ತೋರಿಸಿದ್ದಾರೆ. ಇವುಗಳಲ್ಲಿ ನಿಜಕ್ಕೂ ಸತ್ಯದರ್ಶನ ಆಗುತ್ತದೆ.

ಸತ್ಯಜ್ಞನ ವಚನಗಳಲ್ಲಿ ಹನ್ನೆರಡನೆಯ ಶತಮಾನದ ವಚನಕಾರರ ಧೋರಣೆ ಮುಂದುವರೆದಿದೆ. ವ್ಯಂಗ್ಯ ವಿಡಂಬನೆ, ಮೊನಚು, ಕೆಚ್ಚು ಮೂಡಿ ಬಂದು, ನೈತಿಕ ಮೌಲ್ಯಗಳಿಗೆ ಹೆಚ್ಚು ಒತ್ತು ಕೊಟ್ಟಿದ್ದು ಕಾಣುತ್ತೇವೆ.

ಸಿದ್ಧರಾಮ ಪೋಲೀಸ ಪಾಟೀಲರು ಹೈದ್ರಾಬಾದ ಕರ್ನಾಟಕದ 'ಸರ್ವಜ್ಞ' ಕವಿಯಾಗಿದ್ದಾರೆ. ಈ ಭಾಗದ ಭಾಷೆಯನ್ನು ಧಾರಾಳವಾಗಿ ತಮ್ಮ ತ್ರಿಪದಿಯಲ್ಲಿ ಬಳಸಿದ್ದಾರೆ. ತಮ್ಮ ಸುತ್ತ ಮುತ್ತ ದಿನನಿತ್ಯ ನಡೆಯುವ ಆಗು ಹೋಗುಗಳನ್ನು ಕಂಡದ್ದು ಕಂಡಂತೆ ಬರೆದಿದ್ದಾರೆ. ಅವರ ತ್ರಿಪದಿಗಳಲ್ಲಿ ಈ ಭಾಗದ ಸಾಮಾಜಿಕ, ಸಾಹಿತ್ಯಿಕ, ಆರ್ಥಿಕ, ಐತಿಹಾಸಿಕ, ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಒಳನೋಟಗಳನ್ನು ಕಾಣುತ್ತೇವೆ. ಕನ್ನಡ ನಾಡಿನ ಜನರು ಸುಸಂಸ್ಕೃತರಾಗಿ ಉನ್ನತ ಬದುಕು ಬಾಳಲು ಶ್ರೀ ಸಿದ್ಧರಾಮ ಪೋಲೀಸ ಪಾಟೀಲರಂಥ ಸಮಾಜ ವೈದ್ಯ ಕವಿಯಿಂದ ತ್ರಿಪದಿಯ ಶುದ್ಧ ಗಾಳಿ ಸದಾ ದೊರಕುತ್ತದೆ.

ಸಿದ್ಧರಾಮ ಪೋಲೀಸ ಪಾಟೀಲರ ಸತ್ಯಜ್ಞನ ವಚನಗಳು ಒಂದು ಉತ್ತಮ ಕೃತಿಯಾಗಿದೆ. ತಮ್ಮ ವೈಯುಕ್ತಿಕ ಬದುಕಿನ ಅನುಭವವನ್ನು, ಪ್ರಾದೇಶಿಕ ಮಹಿಮೆಯನ್ನು, ಸಾಹಿತ್ಯ, ಶಿಕ್ಷಣದ ಸ್ಥಿತಿಗತಿಗಳನ್ನು, ಸಾಮಾಜಿಕ ಪಿಡುಗುಗಳನ್ನು, ತಮ್ಮ ಮೊನಚಾದ ಮಾತುಗಳಿಂದ ಮನಸ್ಸಿಗೆ ಹಿಡಿಯುವ ಹಾಗೇ ಮಾಡಿದ್ದಲ್ಲದೆ, ಕತ್ತೆ - ಕುದುರೆ ಒಂದೇ ಆದ ಸಮಾಜದಲ್ಲಿ ವ್ಯತ್ಯಾಸಗಳಿಲ್ಲದೇ ಹೋಗಿದೆ ಎಂದು ಹರಿತವಾಗಿ ವಿಡಂಬಿಸುತ್ತಾರೆ. ಸರ್ವಜ್ಞನ ನಾನಾ ರೀತಿಯ ಅನುಭವ ಸತ್ಯಜ್ಞನಿಗೆ ಮನನವಾಗಿರುವುದು ಮೆಚ್ಚಬೇಕಾದ ಸಂಗತಿಯಾಗಿದೆ.

ಸತ್ಯಜ್ಞನ ವಚನಗಳು ಭಾಗ-2 ರಲ್ಲಿ ವಚನಗಳನ್ನು ಹನ್ನೊಂದು ಶೀರ್ಷಿಕೆಗಳಲ್ಲಿ ವಿಭಾಗಿಸಲಾಗಿದೆ. ಇವುಗಳನ್ನು ಓದುತ್ತಲೇ ಅವುಗಳ ವಿಷಯದ ವಿಚಿತ್ರ ಕಣ್ಮುಂದೆ ಸುಳಿಯುವುದು; ಅವುಗಳ ವಿಶಿಷ್ಟತೆಯಾಗಿದೆ. ಸಮಾಜದಲ್ಲಿ ನಡೆಯುತ್ತಿರುವ ಅನ್ಯಾಯ ಶೋಷಣೆ, ಅಟ್ಟಹಾಸದಿಂದ ಮೆರೆಯುತ್ತಿರುವ ಭ್ರಷ್ಟಾಚಾರ, ಸ್ವಾರ್ಥತೆಯನ್ನು ಬಯಲಿಗೆಳೆಯುತ್ತಲೆ , ಸಮಾಜದಲ್ಲಿ ವಿಪರ್ಯಾಸಗಳನ್ನು ಎತ್ತಿ ತೋರಿಸಲಾಗಿದೆ. ಪ್ರೀತಿ ವಿಶ್ವಾಸ ಮರೆಯಾಗುತ್ತಿದೆ. ಅಭಿಮಾನ ಕಡಿಮೆಯಾಗುತ್ತಿದೆ. ಇಂಗ್ಲಿಷ್ ವ್ಯಾಮೋಹಕ್ಕೆ ಬಲಿಯಾಗಿ ಕನ್ನಡ ಅನಾಥವಾಗಿ ಸೊರಗುತ್ತಿದೆ. ಈ ಮೊದಲಾದ ವಿಷಯಗಳನ್ನು ಕುರಿತು ಸರಳವಾಗಿ, ಮಾರ್ಮಿಕವಾಗಿ ಹೃದಯ ತಟ್ಟುವಂತೆ ಹೇಳಲಾಗಿದೆ.

"ನೀನು ಗಳಿಸಿದ್ದು, ನೀ ತಿನ್ನಲು ಬಂತೇನು ?
ಜೇನು ಹಗಲಿರುಳು ದುಡಿದು ಪರರಿಗೆ ಕೊಡುವ
ಜ್ಞಾನ ನಿನಗಿಲ್ಲ ॥ ಸತ್ಯಜ್ಞ ॥"[45]

ನಾವು ಗಳಿಸಿದ್ದು, ನಾವೇ ತಿನ್ನುವುದು ಸರಿಯಲ್ಲ. ಜೇನು ಹುಳು ಹೇಗೆ ಹಗಲು ರಾತ್ರಿಯೆನ್ನದೇ ದುಡಿದು ಬೇರೆಯವರಿಗೆ ಕೊಡುವ ನೀತಿಯನ್ನು ಮನುಷ್ಯನಿಗೆ ಬರಬೇಕು ಎಂದಿದ್ದಾರೆ ಪಾಟೀಲರು.

"ಭ್ರಷ್ಟತನ ನಿವಾರಣೆ ಅಷ್ಟೊಂದು ಸರಳವೇ ?
ಭ್ರಷ್ಟತನ ಜನರ ರಕ್ತದೊಳು ಸೇರಿರಲು
ಕಷ್ಟಬಲು ಕಷ್ಟ ॥ ಸತ್ಯಜ್ಞ ॥"[46]

ಸಮಾಜದಲ್ಲಿಯ ಅದಕ್ಷತೆ, ಅಪ್ರಾಮಾಣಿಕತೆ, ಮೋಸ, ಅನ್ಯಾಯ, ಅತ್ಯಾಚಾರಗಳನ್ನು ನೋಡಿ ಬೇಸತ್ತ ಲೇಖಕರು ಅವುಗಳಿಂದ ಜನರನ್ನು ಹೊರಬರುವಂತೆ ಮಾಡಿದ ಪ್ರಯತ್ನಗಳು ಫಲಿಸದಾದಾಗ, ನೊಂದು ನುಡಿಯುತ್ತಾರೆ;

"ಕಂಡದ್ದು ಬರೆ ಬರೆದು, । ಮೊಂಡವಾಯಿತು ಪೆನ್ನು ।
ಮೊಂಡ ಜನ ತಮ್ಮ ಗುಣವ ಬಿಡಲಿಲ್ಲ, ನಾ
ಬೆಂಢಾದೆ ಬಳಲಿ ॥ ಸತ್ಯಜ್ಞ ॥"[47]

ಹೀಗೆ ಸಮಾಜದಲ್ಲಿಯ ವಾಸ್ತವತೆಯ ಚಿತ್ರ ಬಿಂಬಿಸುತ್ತಾರೆ.

ಒಟ್ಟಾರೆಯಾಗಿ ಪ್ರಸ್ತುತ ಸಮಾಜವು ಎದುರಿಸುತ್ತಿರುವ ಹಲವಾರು ಬಗೆಯ ಸಮಸ್ಯೆಗಳೊಂದಿಗೆ, ಕಡಿಮೆಯಾಗುತ್ತಿರುವ ನಾಡಾಭಿಮಾನ, ಭಾಷಾಭಿಮಾನ, ಬೆಳೆಯುತ್ತಿರುವ ನಗರೀಕರಣದಿಂದುಂಟಾಗುವ ಅನಾಹುತಗಳು, ಪರಿಸರ ಮಾಲಿನ್ಯದಿಂದುಂಟಾಗುವ ಭೀಕರ ಪರಿಣಾಮಗಳನ್ನು ಚರ್ಚಿಸಿದ್ದಾರೆ.

"ಕನ್ನಡದ ನಾಡಿನಲ್ಲಿ ಕನ್ನಡವ ಕಲಿತವಗೆ
ಉನ್ನತದ ಹುದ್ದೆ ನೀಡಿದರೆ, ಕನ್ನಡವು"
ತನ್ನ ತಾ ಬೆಳೆಗು ॥ ಸರ್ವಜ್ಞ ॥"[48]

"ಪರಿಸರವ ಸ್ವಚ್ಛ ನೀ ಇರಿಸಲಿಕೆ ಗಿಡಗಳನ್ನು,
ಅರಣ್ಯದಿ ಬೆಳೆಸಿ ಸಲುಹಿದರೆ, ಮುಂದೊಮ್ಮೆ
ತರಬಹುದು ಶುದ್ಧಿ ॥ ಸತ್ಯಜ್ಞ ॥"[49]

---

45. ಸತ್ಯಜ್ಞನ ವಚನಗಳು-ಭಾಗ-3, ನೈತಿಕ, ಪು.ಸಂ.-52
46. ಸತ್ಯಜ್ಞನ ವಚನಗಳು-ಭಾಗ-3, ಸಾಮಾಜಿಕ ವಿಡಂಬನೆ, ಪು.ಸಂ.-25
47. ಸತ್ಯಜ್ಞನ ವಚನಗಳು-ಭಾಗ-3, ವೈಯುಕ್ತಿಕ-2, ಪು.ಸಂ.-01
48. ಸತ್ಯಜ್ಞನ ವಚನಗಳು-ಭಾಗ-3, ಸಾಹಿತ್ಯ-ಶಿಕ್ಷಣ, ಪು.ಸಂ.-06
49. ಸತ್ಯಜ್ಞನ ವಚನಗಳು-ಭಾಗ-3, ಸಾಮಾಜಿಕ ವಿಡಂಬನೆ, ಪು.ಸಂ.-26

ಇಲ್ಲಿಯ ಕೆಲವು ಸಮಸ್ಯೆಗಳಿಗೆ ಸರಳವಾಗಿ, ಮೃದುವಾಗಿ, ಹಿತವಾಗಿ ಸಲಹೆಗಳನ್ನು ನೀಡಿದ್ದಾರೆ. ವಿಪರ್ಯಾಸಗಳಿಗೆ ಪರಿಹಾರ ಸೂಚಿಸಿ, ನೈತಿಕ ಮೌಲ್ಯದಿಂದ ಕೂಡಿದ ಆದರ್ಶ ಸಮಾಜದ ರಚನೆಯ ಹೊಳಹನ್ನು ಸೂಚಿಸಿರುವುದು ಗಮನಾರ್ಹವಾಗಿದೆ.

ವಚನಗಳನ್ನು ಬರೆಯುವವರು ಅನೇಕರಿದ್ದರೂ, ಸರ್ವಜ್ಞನ ವಚನದ ಹಾಗೆ ತ್ರಿಪದಿಯಲ್ಲಿ ವಚನ ರಚಿಸಿರುವ ಕೆಲ ವಚನಕಾರರಲ್ಲಿ ಕಲಬುರ್ಗಿಯ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಒಬ್ಬರು.

ಪ್ರತಿಯೊಂದನ್ನು ಸೂಕ್ಷ್ಮವಾಗಿ ನೋಡಿ, ಪರಿಶೀಲಿಸಿ, ಪ್ರಾಮಾಣಿಸಿ ಆ ವಿಷಯಗಳ ಬಗ್ಗೆ ಈಗಾಗಲೇ ಏಳು ಸಾವಿರಕ್ಕಿಂತ ಹೆಚ್ಚು ವಚನಗಳನ್ನು ಬರೆದಿದ್ದಾರೆ. ಹಾಗೂ ಬರೆಯುತ್ತಾ ಇರುತ್ತಾರೆಂಬುದಕ್ಕೆ ಈ ಕೆಳಕಂಡ ವಚನವೇ ಸಾಕ್ಷಿ.

''ಸತ್ಯಜ್ಞನ ವಚನಗಳು । ಹೊತ್ತು ತಂದವು ಅಲ್ಲ ।
ಚಿತ್ತ ಬಂದಾಗ ಕಂಡಂಥ ಅನುಭವದ
ಬಿತ್ತರಿಸಿದನ್ನೈ ॥ ಸತ್ಯಜ್ಞ ॥''[50]

ಸರ್ವಜ್ಞ ಕವಿಯಂತೆ ಸಿದ್ಧರಾಮ ಪೋಲೀಸ ಪಾಟೀಲರು ಯಾರ ಹಂಗಿಲ್ಲದೆ ನೋಡಿದ್ದನ್ನು ನೋಡಿದ ಹಾಗೆ, ಇದ್ದುದನ್ನು ಇದ್ದ ಹಾಗೆ ವಚನಗಳನ್ನು ರಚಿಸಿದ್ದಾರೆ. ಅವರ ವಚನಗಳು ನೇರವಾದ ನುಡಿಗಳಿಂದ ಕೂಡಿವೆ. ಇಲ್ಲಿಯ ಪ್ರತಿಯೊಂದು ವಚನಗಳು ಮನ ಬಿಚ್ಚಿ ಹೇಳುತ್ತವೆ.

ಒಮ್ಮೆ ಓದಿದ ಮೇಲೆ ಪುನಃ ಪುನಃ ಓದಬೇಕೆಂದು ಅನಿಸುವುದಲ್ಲದೇ ಸಂದರ್ಭಗಳು ಬಂದಾಗ ಸರ್ವಜ್ಞನ ವಚನಗಳು ನೆನಪಿಗೆ ಬರುವಂತೆ , ಇವರ ವಚನಗಳು ನೆನಪಿಗೆ ಬರುತ್ತವೆ. ಒಟ್ಟಾರೆ ಸಂಗ್ರಹಕ್ಕೆ ಯೊಗ್ಯವಾದ ಹೊತ್ತಿಗೆ ಇವರ ವಚನಗಳದಾಗಿದೆ.

ಪೋಲೀಸ ಪಾಟೀಲರು ದಕ್ಷತೆಗೆ ಮತ್ತು ಪ್ರಾಮಾಣಿಕತೆಗೆ ಹೆಸರಾದವರು. ನಿಷ್ಠೆಯೇ ಅವರ ಬದುಕಿನ ಉಸಿರಾಗಿದೆ. ಅಂತೆಯೇ ಅವರ 'ಸತ್ಯಜ್ಞ' ವಚನಗಳನ್ನು ರಚಿಸಿ. ಆಧುನಿಕ 'ಸರ್ವಜ್ಞ'ನೆಂದು ಹೆಸರು ಗಳಿಸಿದ್ದಾರೆ. 'ಸತ್ಯಜ್ಞ' ಎಂಬ ವಚನಾಂಕಿತದ ಮೂಲಕ, ಕುಸಿಯುತ್ತಿರುವ ಇಂದಿನ ಜೀವನ ಮೌಲ್ಯಗಳನ್ನು ಎತ್ತಿ ಹಿಡಿದಿದ್ದಾರೆ.

---

50. ಸತ್ಯಜ್ಞನ ವಚನಗಳು-ಭಾಗ-3, ವೈಯುಕ್ತಿಕ-7, ಪು.ಸಂ.-02

## 8. ಇತರೆ ಸಾಹಿತ್ಯ

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಮಂಡಿಸಿದ ಜನಪ್ರಿಯ ಸಾಹಿತ್ಯದ ಜೊತೆಗೆ, ಇತರೆ ಸಾಹಿತ್ಯಗಳನ್ನು ಕೂಡಾ ರಚಿಸಿದ್ದಾರೆ. ಅವುಗಳೆಂದರೆ;

- ವೈಜ್ಞಾನಿಕ ಸಾಹಿತ್ಯ (ಭೂ ಗರ್ಭ ಜಲ)
- ಹಾಸ್ಯ ಸಾಹಿತ್ಯ
- ಅಭಿನಂದನ ಲೇಖನಗಳು.

**ಭೂಗರ್ಭ ಜಲ :**

ನೀರು, ಪಶು, ಪಕ್ಷಿ, ಪ್ರಾಣಿ, ಸಸ್ಯಗಳಿಗೆಲ್ಲ ಬೇಕಾದ ಅತ್ಯವಶ್ಯಕ ವಸ್ತು ನೀರು. ನೀರಿಲ್ಲದೆ ಪ್ರಕೃತಿಯಲ್ಲಿ ಜೀವರಾಶಿಯೇ ಇಲ್ಲ. ಇಂಥ ಅವಶ್ಯಕವಾದ ವಸ್ತುವು ಕುರಿತು ಭೂಮಿಯ ಮೇಲೆ ಮತ್ತು ಒಳಗೆ ದೊರಕುವ ಬಗ್ಗೆ ಅದರ ಬಳಕೆ, ಅಂತರ್ಜಲ ಕಂಡು ಹಿಡಿಯುವ ಹೊಸ ಹೊಸ ಸಂಶೋಧನೆಗಳ ಬಗೆಗೆ ಪಾಟೀಲರು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ''ಕೊಡದೊಳಗೆಷ್ಟು ಹಿಡಿವದು ಸಮುದ್ರ ಜಲ ?''[51] ವೆಂಬಂತೆ ಈ ಚಿಕ್ಕ ಹೊತ್ತಿಗೆಯಲಿ, ಬಹು ವಿಸ್ತಾರವಾದ ಭೂಗರ್ಭ ಜಲದ ವಿಷಯವನ್ನು ತಿಳಿಸಲಾಗಿದೆ. ತೆರೆದ ಬಾವಿಗಳು ಅಲ್ಲದೆ, ಆಳವಾಗಿ ಕೊರೆವ ಬೋರವೆಲ್ ಉಪಯೋಗ ನೀರಾವರಿಗಾಗಿ ಮಾಡಿಕೊಳ್ಳಬೇಕಾಗಿದೆ. ಕಷ್ಟ ಕಾಲಕ್ಕೆ ಉಪಯೋಗ ಬೀಳುವ ಭೂಗರ್ಭ ಜಲವನ್ನು 'ಗುಪ್ತನಿಧಿ' ಎಂದೇ ಭಾವಿಸಿ, ಒಳ್ಳೆಯ ಉಪಯೋಗ ಮಾಡಿಕೊಳ್ಳಬೇಕೆಂದು ತಿಳಿಸುತ್ತಾರೆ. ಅತೀ ಬಳಕೆಯಿಂದ ಅನಾಹುತ ಆಗುವುದರಿಂದ ಅವಶ್ಯಕವಾದಷ್ಟು ಅಂತರ್ಜಲ ಬಳಕೆ ಮಾಡಿಕೊಂಡು, ಬೆಳೆಗಳನ್ನು ಬೆಳೆದು, ಮುಂದುವರಿದ ಜಗತ್ತಿನೊಂದಿಗೆ ನಾವೂ ದಾಪುಗಾಲು ಹಾಕಬೇಕೆಂದಿದ್ದಾರೆ.

ಎಲ್ಲ ಗ್ರಹಗಳಲ್ಲಿ ನಮ್ಮ ಭೂ ಗ್ರಹವು ಹಲವಾರು ವೈಚಿತ್ರ್ಯ ವೈಶಿಷ್ಟ್ಯಗಳಿಂದಕೂಡಿದೆ. ಬೇರೆ ಯಾವ ಗ್ರಹದಲ್ಲಿಯೂ ಕಾಣಸಿಗದ ನೀರು, ವೃಕ್ಷ ಹಾಗೂ ಜೀವ ಈ ಭೂಗ್ರಹದಲ್ಲಿದೆ. ಜೀವರಾಶಿ ವಾಸಿಸಲು ಯೋಗ್ಯವಾದ ವಾತಾವರಣ ಇಲ್ಲಿ ಬಿಟ್ಟರೆ ಬೇರೆಲ್ಲಿಯೂ ಇಲ್ಲವೆಂದೇ ವಿಜ್ಞಾನಿಗಳ ನಂಬಿಕೆಯಾಗಿದೆ.

---

51 ಭೂಗರ್ಭಜಲ - ಶ್ರೀ ಸಿದ್ಧರಾಮ ಪೋಲೀಸ ಪಾಟೀಲ, ಪುಟ.. ಸಂ. 1

ಗಾಳಿಯಿಲ್ಲದೆ ಮನುಷ್ಯ ಕೆಲವು ಕ್ಷಣ ಮಾತ್ರ ಜೀವಿಸಬಲ್ಲ. ಹಾಗೆಯೇ ನೀರಿಲ್ಲದೆಯೂ ಬದುಕಲು ಸಾಧ್ಯವಿಲ್ಲ. ಪಂಚ ಮಹಾಭೂತಗಳಲ್ಲಿ ನೀರು ಒಂದಾಗಿದ್ದು, ಪಂಚಭೂತಗಳಿಂದ ನಿರ್ಮಿತವಾದ ಈ ಶರೀರಕ್ಕೆ ನೀರು ಅತ್ಯವಶ್ಯಕ. ಮನುಷ್ಯನ ಶರೀರ ನೂರಕ್ಕೆ ಎಂಭತ್ತಾರರಷ್ಟು ನೀರಿನಿಂದಲೇ ಕೂಡಿದೆ. ನೀರು ನಮ್ಮ ಉಸಿರಾಗಿದೆ. ಹೀಗಾಗಿ ಗಾಳಿಯ ನಂತರದ ಪ್ರಮುಖ ಸ್ಥಾನ ನೀರಿನದ್ದಾಗಿದೆ. ನಮ್ಮ ಬಳಕೆಗೆ ಭೂಮಿಯ ಮೇಲೆ ದೊರಕುವ ನೀರು ಕೇವಲ ಒಂದು ಭಾಗ ಮಾತ್ರ. ಅತೀ ಅಲ್ಪ ಪ್ರಮಾಣದಲ್ಲಿ ದೊರಕುವ ನೀರು ಕೇವಲ ಒಂದು ಭಾಗ ಮಾತ್ರ ಅಲ್ಲದೇ ಅಲ್ಪ ಪ್ರಮಾಣದಲ್ಲಿ ದೊರಕುವ ನೀರಿನ ಸದುಪಯೋಗವನ್ನು ಶಿಸ್ತು ಬದ್ಧವಾಗಿ ವೈಜ್ಞಾನಿಕವಾಗಿ ಮಾಡಿಕೊಳ್ಳುವುದು ನಮ್ಮೆಲ್ಲರ ಹೊಣೆಯಾಗಿದೆ.

ನೀರು ನಮಗೆ ಎಲ್ಲಿಂದ ಸಿಗುತ್ತದೆ. ಯಾವ ರೀತಿಯಿಂದ ಸಿಗುತ್ತದೆ ಎಂಬುದನ್ನು ತಿಳಿದುಕೊಳ್ಳುವುದು ಅತ್ಯವಶ್ಯಕವಾಗಿದೆ. ಸಮುದ್ರದ ನೀರು ಸೂರ್ಯನ ಶಾಖದಿಂದ ಆವಿಯಾಗಿ, ವಾತಾವರಣದಲ್ಲಿ ಸೇರಿ, ಗಾಳಿಯೊಂದಿಗೆ ಮೇಲೆ ಏರಿ, ಮೋಡದ ರೂಪವನ್ನು ತಾಳುತ್ತದೆ. ಗಾಳಿಯೊಂದಿಗೆ ದಿಕ್ಕು ದಿಕ್ಕಿಗೆ ಚಲಿಸುತ್ತದೆ. ತಂಪು ತಗುಲಿದೊಡನೆ ಅಲ್ಲಿ ಮಳೆಯ ಹನಿಗಳ ರೂಪದಲ್ಲಿ ಭೂಮಿಯ ಮೇಲೆ ಬೀಳುತ್ತದೆ. ನದಿ, ಹಳ್ಳ, ಕೆರೆ, ಕುಂಟೆಗಳಾಗಿ ಹರಿದು ಮತ್ತೆ ಸಮುದ್ರ ಸೇರುತ್ತದೆ. ಈ ಕ್ರೀಯೆ ಮೇಲಿಂದ ಮೇಲೆ ನಡೆಯುತ್ತದೆ. ಇದು ನೀರಿನ ಒಂದು ಚಕ್ರ. ಇದಕ್ಕೆ 'ಜಲಚಕ್ರ' ಎನ್ನುವರು. ನೀರಿಗೆ ನಾಶವೆಂಬುದೇ ಇಲ್ಲ. ಒಬ್ಬ ಆಂಗ್ಲ ಕವಿ ಹೇಳಿದಂತೆ "Men may come and men may go, but I go on forever" ಅಂದರೆ ಮನುಷ್ಯರು ಹುಟ್ಟುತ್ತಾರೆ, ಸಾಯುತ್ತಾರೆ. ನಾನು ಮಾತ್ರ ಎಂದೆಂದಿಗೂ ಹರಿಯುತ್ತಲೇ ಇರುತ್ತೇನೆ ಎಂದು ನದಿಯು ಹೇಳುವ ಮಾತು ಸತ್ಯವಾದದ್ದು. ಪ್ರತಿ ವರ್ಷ ನಡೆಯುವ ಈ ಜಲಚಕ್ರ ತಪ್ಪಿದಲ್ಲಿ, ಭೂಮಿಯ ಮೇಲೆ ಅನೇಕ ಪರಿಣಾಮಗಳಾಗುತ್ತವೆ. ಜನ ಜೀವನ ಅಸ್ತವ್ಯಸ್ತವಾಗುವುದು ಖಂಡಿತ.''[52]

ಬಿದ್ದ ನೀರು ನದಿ,ಕೆರೆ, ಸರೋವರಗಳ ರೂಪದಲ್ಲಿ ಸಂಗ್ರಹಗೊಳ್ಳುವುದು ಒಂದು ಅಂಶವಾದರೆ, ಇನ್ನೂ ಕೆಲವು ಭಾಗ ಭೂಮಿಯಲ್ಲಿಯೇ ಇಳಿದು ಭೂಗರ್ಭಜಲ ಅಥವಾ 'ಅಂತರ್ಜಲ'ವಾಗಿ ಭೂಮಿಯೊಳಗೆ ಸಿಗುತ್ತದೆ.

---

52 ಭೂಗರ್ಭಜಲ - ಶ್ರೀ ಸಿದ್ಧರಾಮ ಪೋಲೀಸ ಪಾಟೀಲ, ಪುಟ.. ಸಂ. 3

**ಹಾಸ್ಯ ಸಾಹಿತ್ಯ :**

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಹಾಸ್ಯ ಸಾಹಿತ್ಯದ ಬಗ್ಗೆ ಸಾಕಷ್ಟು ಲೇಖನ, ಕವನಗಳನ್ನು ಬರೆದಿದ್ದಾರೆ. ಇವರ ಹಾಸ್ಯ ಕವನಗಳು ಅನೇಕ ಪತ್ರಿಕೆಗಳಲ್ಲಿ, ದೂರದರ್ಶನ ಹಾಗೂ ಆಕಾಶವಾಣಿಯಲ್ಲಿ ಪ್ರಸಾರಗೊಂಡಿವೆ. ಅವರ ಹಾಸ್ಯ ಲೇಖನಗಳು ತುಮಕೂರಿನಿಂದ ಪ್ರಕಟಗೊಳ್ಳುವ 'ನಗೆ ಮುಗುಳು' ಹಾಸ್ಯ ಮಾಸ ಪತ್ರಿಕೆಯಲ್ಲಿ ಆಗಾಗ ಪ್ರಕಟಗೊಳ್ಳುತ್ತವೆ. ಅಲ್ಲದೆ 'ಅರಿವು - ಆಚಾರ' ಪತ್ರಿಕೆಯಲ್ಲಿ ಮತ್ತು 'ಸಂಜೆವಾಣಿ', 'ದೀಪಾವಳಿ ಹಬ್ಬದ ವಿಶೇಷಾಂಕ' ಗಳಲ್ಲಿ ಕವನ ಮತ್ತು ಲೇಖನ ಪ್ರಕಟಗೊಂಡಿವೆ. ಇಷ್ಟರಲ್ಲೇ ಇವರ ಒಂದು ಹಾಸ್ಯ ಪ್ರಬಂಧ ಸಂಕಲನ ಪ್ರಕಟಣೆಗೊಳ್ಳುವ ಸಿದ್ಧತೆ ನಡೆದಿದೆ.

**ಅಭಿನಂದನ ಲೇಖನಗಳು :**

ಕಲಬುರ್ಗಿ ಜಿಲ್ಲೆಯಲ್ಲಿ ಹೊರ ಬಂದ ಅನೇಕ ರಾಜಕಾರಣಿಗಳ, ಸಾಹಿತಿಗಳ, ಗಣ್ಯ ವ್ಯಕ್ತಿಗಳ ಅಭಿನಂದನಾ ಗ್ರಂಥಗಳಿಗೆ ಸಿದ್ಧರಾಮ ಪೋಲೀಸ ಪಾಟೀಲರು ಸಂದರ್ಭಾನುಸಾರ ಲೇಖನ ಹಾಗೂ ಕವನಗಳನ್ನು ಬರೆದು ಕೊಟ್ಟಿದ್ದಾರೆ. ಯಾವುದೇ ಅಭಿನಂದನಾ ಗ್ರಂಥ ಮಾಡುತ್ತಿರುವಾಗ ಸಂಪಾದಕರಾದವರು ಇವರ ಲೇಖನಗಳನ್ನು ಕೇಳಿ ಪಡೆಯುವ ರೂಢಿ ಜನಜನಿತವಾಗಿದೆ. ಕೆಲವೊಂದು ಅಭಿನಂದನಾ ಗ್ರಂಥಗಳ ಬಗ್ಗೆ ಹೇಳಬೇಕಾದರೆ ಸುಮಾರು ಹತ್ತಾರು ಅಭಿನಂದನಾ ಗ್ರಂಥಗಳಿಗೆ ಲೇಖನ, ಕವನಗಳು ಬರೆದಿದ್ದಾರೆ. ಅವುಗಳಲ್ಲಿ

**1. ಮಹಾದೇವಪ್ಪ ರಾಂಪೂರೆ :**

ಹಿರಿಯ ರಾಜಕೀಯ ಧುರಿಣರು, ಹಾಗೂ ಶಿಕ್ಷಣ ತಜ್ಞರು ಆದಂಥ ಶ್ರೀ ರಾಂಪೂರೆಯವರ ಬಗ್ಗೆ **''ಶಿಕ್ಷಣ ಶಿಲ್ಪಿ ಮಹದೇವಪ್ಪ ರಾಂಪೂರೆ''** ಎಂಬ 18 ನುಡಿಯ ಕವನಗಳನ್ನು ಬರೆದಿದ್ದು, ಅದರಲ್ಲಿ ರಾಂಪೂರೆ ಅವರ ರಾಜಕೀಯ ಕಾರ್ಯ ಚಟುವಟಿಕೆಯ ಬಗ್ಗೆ ಶಿಕ್ಷಣದ ಬಗ್ಗೆ ಅವರಿಗಿದ್ದ ಕಾಳಜಿ ಹಾಗೂ ಮುಂದಾಲೋಚನೆಯ ಕಾರ್ಯಕ್ರಮಗಳ ಬಗ್ಗೆ ವಿಸ್ತಾರವಾಗಿ ವಿವರಿಸುತ್ತಾ :

'' ಆಸೆಯನ್ನೆಲ್ಲಾ ಈಡೇರಿಸುವದು ಸಾಧ್ಯವೇ ಈ ನರಗೆ ।
ಎಲ್ಲವು ಮುಗಿದು ಉಳಿದಿಹುದೊಂದು ಆಸೆಯು ಈ ವರೆಗೆ ॥
ಕಲಬುರ್ಗಿಯ ಸ್ಥಳದಲ್ಲಿ ಒಂದು ಯುನಿವರ್ಸಿಟಿಗೆಂದು ।
ಹಗಲು ಇರುಳು ಮಾಡಿದರಿವರು ಯತ್ನವ ಅದಕಾಗಿ ॥''[53]

ಹೀಗೆ ರಾಂಪೂರೆ ಅವರು ಗುಲಬರ್ಗಾದಲ್ಲಿ ಯುನಿವರ್ಸಿಟಿ ಆಗುವ ಕನಸು ಕಂಡದ್ದನ್ನು ಆವಾಗಲೇ ಕವನದಲ್ಲಿ ನಿರೂಪಿಸಿದ್ದು, ಸಧ್ಯಕ್ಕೆ ಕಾರ್ಯ ರೂಪಕ್ಕೆ ಬಂದದ್ದು ಗೊತ್ತಿರುವ ವಿಷಯ.

**2. ಎಸ್. ಧರ್ಮಸಿಂಗ್ :**

ಈ ಭಾಗದ ಹಿರಿಯ ರಾಜಕಾರಣಿಗಳು ಹಾಗೂ ನಮ್ಮ ರಾಜ್ಯದ ಮಾಜಿ ಮುಖ್ಯಮಂತ್ರಿಗಳೂ ಆದ ಶ್ರೀ ಧರ್ಮಸಿಂಗ್‌ರ ಅಭಿನಂದನಾ ಗ್ರಂಥ, 'ಧರ್ಮಸಿಂಧು' ಗ್ರಂಥಕ್ಕೆ ಶ್ರೀ ಪಾಟೀಲರು 'ಅಜಾತ ಶತ್ರು ಶ್ರೀ ಧರ್ಮಸಿಂಗ್' ಎಂಬ ಲೇಖನವನ್ನು ಬರೆದದ್ದು. ಅದರಲ್ಲಿ ಶ್ರೀ ಧರ್ಮಸಿಂಗ್‌ರ ಸಂಪೂರ್ಣ ವ್ಯಕ್ತಿತ್ವವನ್ನು ವಿವರಿಸಿದ್ದಾರೆ. ಶ್ರೀ ಧರ್ಮಸಿಂಗ್‌ರ ಬಗ್ಗೆ ಹೇಳುತ್ತಾ ಆ ಲೇಖನದಲ್ಲಿ ''ರಾಜಕೀಯದಲ್ಲಿ ಯಾರೂ ವೈರಿಗಳಲ್ಲ, ಹಾಗೆ ಯಾರೂ ಮಿತ್ರರಲ್ಲ ಎಂಬ ಮಾತು ಇದೆ. ಆದರೆ ಧರ್ಮಸಿಂಗ್‌ರಿಗೆ ಯಾವ ವೈರಿಗಳೇ ಇಲ್ಲ. ಎಲ್ಲರೂ ಮಿತ್ರರೇ ಯಾರಿಗೂ ಭಿನಾಭಿಪ್ರಾಯ ಎಡೆಗೊಡದೆ ಸದಾ ನಗು ನಗುತ್ತಾ ಎಲ್ಲರ ಮನ ಗೆಲ್ಲುವ ಧುರೀಣರು ಎಂದು ಅವರ ಸಂಪೂರ್ಣ ವ್ಯಕ್ತಿತ್ವವನ್ನು ನಿರ್ದಿಷ್ಟವಾಗಿ ಚಿತ್ರಿಸಿದ್ದಾರೆ.''[54]

**3. ಡಾ. ಎಂ. ಎಸ್. ಲಠ್ಠೆ :**

ಡಾ. ಎಂ. ಎಸ್. ಲಠ್ಠೆ ಅವರ ಅಭಿನಂದನಾ ಗ್ರಂಥ 'ಸಂತುಷ್ಟಿ' ಇದಕ್ಕೆ ಶ್ರೀ ಪಾಟೀಲರು ''ಮೃದು ವಚನದ ಡಾ. ಮಲ್ಲಿಕಾರ್ಜುನ ಲಠ್ಠೆ'' ಎಂಬ ಅಪರೂಪದ ಲೇಖನ ಬರೆದಿದ್ದು. ಅದರಲ್ಲಿ ಡಾ. ಲಠ್ಠೆ ಅವರ ಗುಣಗಾನ ಮಾಡಿದ್ದಾರೆ. ಆ ಲೇಖನದಲ್ಲಿ ಲಠ್ಠೆ ಅವರ ಬಗ್ಗೆ ಹೀಗೆ ಹೇಳಲಾಗಿದೆ.

''ಒಬ್ಬ ಸಾಹಿತಿಯ ಹಿರಿಮೆ ಗರಿಮೆಯ ಬಗ್ಗೆ ಆತನು ಬರೆದ ಒಟ್ಟು ಪುಸ್ತಕಗಳ ಗುಣಸಂಖ್ಯೆಯಿಂದ ತಿಳಿಯಲಾಗದು. ಹಾಗೆ ಮಾಡಿದರೆ ಬಹಳಷ್ಟು ಜನ ಸಂಖ್ಯೆಯಲ್ಲಿ ದೊಡ್ಡವರಾದದ್ದನ್ನು ಸಿಗಬಹುದು. ಆದರೆ ಪುಸ್ತಕಗಳ ಸಂಖ್ಯೆ ಮುಖ್ಯವಲ್ಲ. ಸತ್ವ,

---

53. ಶಿಕ್ಷಣ ಶಿಲ್ಪಿ ಮಹಾದೇವಪ್ಪ ರಾಂಪುರೆ - ಡಾ. ಬಸವರಾಜ ಪೋಲೀಸ ಪಾಟೀಲ, ಪು.ಸಂ. -137
54. ಧರ್ಮಸಿಂಧು - ಪ್ರೊ. ಶಿವರಾಜ ಪಾಟೀಲ, ಪುಟ. 170

ಅಂಶ, ಇವೆಲ್ಲವುದಕ್ಕಿಂತ ಹೆಚ್ಚಾಗಿ, ಆ ಸಾಹಿತಿಯ ಬದುಕು, ನಡೆ ನುಡಿಗಳು ಅಷ್ಟೇ ಮುಖ್ಯವೆನಿಸುತ್ತವೆ. ಎಲ್ಲ ಹಿರಿ-ಕಿರಿಯರಿಗೆ ಬೇಕಾದವರಾಗಿ, ಮಾರ್ಗದರ್ಶಕರಾಗಿ ಸಹಕರಿಸಿ ನಡೆಯುವ ಪರೋಪಕಾರಿ, ಸಹೃದಯ ಸಾಹಿತಿಗಳು ದೊರಕುವುದು ಬಹಳ ದುರ್ಲಭ. ಅಂಥವರಲ್ಲಿ ಎಂ. ಎಸ್. ಲಠ್ಠೆ ಅವರು ಒಬ್ಬರು.''[55]

**4. ಡಾ. ಬಿ.ಜಿ. ಜವಳಿ :**

ಡಾ. ಜವಳಿ ಅವರ 'ಬಹುಮುಖಿ' ಎಂಬ ಅಭಿನಂದನ ಗ್ರಂಥಕ್ಕೆ ಪಾಟೀಲರು ಕವನ ರೂಪದಲ್ಲಿ ಅಭಿನಂದನೆ ಸಲ್ಲಿಸಿದ್ದಾರೆ. ಜವಳಿಯವರ ನಡೆ ನುಡಿ, ಅವರ ಹವ್ಯಾಸ, ಅವರ ಮನೋಧರ್ಮ, ಅವರ ಸ್ವಭಾವವನ್ನು ಕುರಿತು ಸತ್ಯಜ್ಞನ ವಚನಗಳ ರೂಪದಲ್ಲಿ ನಿರೂಪಿಸಿದ್ದಾರೆ.

''ಬಿಳಿಪ್ಯಾಂಟು , ಬಿಳಿ ಶರ್ಟು, ಬಿಳಿದಾಡಿ, ಮುಖತುಂಬ
ಕಲುಷಿತವು ಇಲ್ಲ ಮನದಲ್ಲಿ! ಇವರ‍್ಯಾರು ?
ಜವಳಿಯವರೆಂದ ॥ ಸತ್ಯಜ್ಞ ॥''[56]

ಹೀಗೆ ಅವರ ವ್ಯಕ್ತಿ ಪರಿಚಯ ಮಾಡಿದಲ್ಲದೇ ಅವರು ಮಾತನಾಡುವ ಶೈಲಿಯ ಬಗ್ಗೆ ಸತ್ಯಜ್ಞನ ವಚನದಲ್ಲಿ

'' ಬಸವ ಜವಳಿಯವರು ಹಾಸ್ಯ ತುಂಬಿದ ವ್ಯಕ್ತಿ
ಭಾಷಣವ ಮಾಡುತಿರೆ, ಎಷ್ಟು ಹೊತ್ತಾದ್ರು
ಬೇಸರವೇ ಇಲ್ಲ ॥ ಸತ್ಯಜ್ಞ॥''[57]

ಇದಲ್ಲದೇ ಎಚ್.ಕೆ. ಇ. ಸೊಸೈಟಿಯಲ್ಲಿ ಸುಮಾರು ಐದು ಬಾರಿ ಅಧ್ಯಕ್ಷರಾಗಿ ಆಯ್ಕೆಯಾದ ಬಗ್ಗೆ ವಿವರಿಸುತ್ತಾ:

'' ಎಚ್.ಕೆ. ಇ. ಅಧ್ಯಕ್ಷ ಹೆಚ್ಚು ಸಲ ಆದವರು
ನೆಚ್ಚಿನಾ ಜವಳಿಯವರೇ ಯಾಕಂದ್ರೆ
ಅಚ್ಚುಕಟ್ಟುತನ ॥ ಸತ್ಯಜ್ಞ ॥''[58]

ಇದು ಅಲ್ಲದೆ ಇನ್ನೂ ಅನೇಕ ಅಭಿನಂದನ ಲೇಖನಗಳು ಬರೆದಿದ್ದಾರೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ, ಬಿ. ಮಹಾದೇವಪ್ಪ - 'ಸಮರ್ಪಣಾ' ಗ್ರಂಥ, ಶ್ರೀ ಕೆ. ಶಾಂತಯ್ಯನವರ

---

55. ಸಂತುಷ್ಟಿ-ಡಾ. ಸಂಗಮೇಶ ಸವದತ್ತಿಮಠ -ಪು. ಸಂ. 370.
56. 'ಬಹುಮುಖಿ' - ಪಿ. ಎಸ್. ಶಂಕರ, ಪು.ಸಂ. 134
57. 'ಬಹುಮುಖಿ'- ಪಿ. ಎಸ್. ಶಂಕರ ಪು.ಸಂ. 134
58. 'ಬಹುಮುಖಿ'- ಪಿ. ಎಸ್. ಶಂಕರ ಪು.ಸಂ. 134-135

ಅಭಿನಂದನಾ ಗ್ರಂಥ 'ಚೈತನ್ಯ ಶ್ರೀ', ಹಿರಿಯ ಸಾಹಿತಿಗಳಾದ ಪ್ರೊ. ಬಾಲಚಂದ್ರ ಜೈಶೆಟ್ಟಿ ಅವರ ಅಭಿನಂದನಾ ಗ್ರಂಥ ' ನಮ್ಮ ಅನುವಾದಕ' , ದಿ. ಅನಂತರಾವ ದೇಶಮುಖ ಅವರ ಸ್ಮರಣ ಸಂಚಿಕೆ ' ಅನಂತ ಸ್ವರ್ಣ' ಮತ್ತು ಅಫಜಲಪೂರ ತಾಲೂಕು ಶಾಸಕರಾದ ಎಂ. ವೈ ಪಾಟೀಲರ ಅಭಿನಂದನಾ ಗ್ರಂಥ.

ಪಾಟೀಲರಿಗೆ ಕಾಲಜ್ಞಾನ, ನಾಡಿ ಪರೀಕ್ಷೆ, ಜೋತಿಷ್ಯ, ಜಲಶೋಧ, ಮನಶೋಧಗಳತ್ತ ಹೆಚ್ಚಿನ ಒಲವು. ಇಂಥ ವಿಷಯಗಳ ಮೇಲೆ ಕಣ್ಣಾಡಿಸಿ ಕವಿತೆ ರಚಿಸಿದ್ದಾರೆ.

# ಅಧ್ಯಾಯ-4

## ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಬಗ್ಗೆ ಕೆಲವು ಸಾಹಿತಿಗಳ ಅಭಿಪ್ರಾಯಗಳು

ಸಾಹಿತ್ಯರಚನೆಯ ಜೊತೆಗೆ, ಸಾಹಿತ್ಯ ವಿಮರ್ಶೆ ಕೂಡಾ ತುಂಬಾ ಮಹತ್ವದ್ದು. ವಿಮರ್ಶೆಯು ಸಾಹಿತ್ಯದ ವಿಭಿನ್ನ ಮುಖಗಳನ್ನು ತೋರಿಸಿಕೊಡುತ್ತದೆ. ಹಾಗೂ ಸಾಹಿತ್ಯ ಬೆಳವಣಿಗೆಗೂ ಅನುಕೂಲವಾಗುತ್ತದೆ.

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಹಲವು ಪ್ರಕಾರದ ಸಾಹಿತ್ಯವನ್ನು ರಚಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ, ಕವನ ಸಂಕಲನ, ಪ್ರಬಂಧ, ತತ್ವಪದ, ತ್ರಿಪದಿ ವಚನಗಳು..... ಮುಂತಾದವು. ಇವರು ಬರೆದ ಲೇಖನಗಳಿಗೆ ಅನೇಕ ಶ್ರೇಷ್ಠ ಸಾಹಿತಿಗಳು ತಮ್ಮದೇ ಆದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವುಗಳಲ್ಲಿ ಕೆಲವು ಪ್ರಮುಖ ಸಾಹಿತಿಗಳ ಅಭಿಪ್ರಾಯಗಳು ಇಂತಿವೆ.

1. ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಕೆಲ ವರ್ಷಗಳ ಹಿಂದೆ ನನ್ನ ವಿದ್ಯಾರ್ಥಿಯಾಗಿದ್ದವರು. ವಿದ್ಯಾರ್ಥಿ ಜೀವನದಲ್ಲಿದ್ದ ಉತ್ಸಾಹವನ್ನು ಅವರು ಇದುವರೆಗೂ ಉಳಿಸಿಕೊಂಡು ಬಂದಿದ್ದಾರೆ. ಶ್ರೀ ಪೋಲೀಸ ಪಾಟೀಲರು ಸಮಾಜದ ಹಿತಚಿಂತನೆಯ ಬಗ್ಗೆ ಕಳಕಳಿಯುಳ್ಳವರು. ಅವರು ಶ್ರೇಷ್ಠ ಮಟ್ಟದ ಜಾನಪದ ಕವಿಗಳೂ ಆಗಿದ್ದಾರೆ. 'ನಾನೂ ನಮ್ಮಪ್ಪನ್ಹಾಂಗ' ಎಂಬ ಕೃತಿಯ ಮೂಲಕ ಈಗಾಗಲೇ ಸಾಹಿತ್ಯ ಲೋಕಕ್ಕೆ ಪರಿಚಯವಾಗಿದ್ದಾರೆ. ಇದೀಗ ಹೊರಬರುತ್ತಿರುವದು 'ಸತ್ಯಜ್ಞಾನ ವಚನಗಳು'. ಈ ಕೃತಿ ಅವರ ಪ್ರತಿಭಾನ್ವಿತ ಶಕ್ತಿಯ

ದ್ಯೋತಕವಾಗಿ ಅರಳಿ ಬಂದಿದೆ. ಇಂಜೀನಿಯರ್ ವೃತ್ತಿಯೊಂದಿಗೆ ಸಾಹಿತ್ಯಕ ಪ್ರವೃತ್ತಿಯನ್ನು ಹೊಂದಿರುವ ಅವರಿಂದ ಇನ್ನೂ ಇಂಥ ಹಲವಾರು ಕೃತಿಗಳು ಹೊರಬರಲಿ ಎಂದುಹಾರೈಸುವೆನು.

ಡಾ. ಬಿ. ಎಸ್. ಪಾಟೀಲ
ಪ್ರಿ. ಇಂಜಿನಿಯರಿಂಗ್ ಕಾಲೇಜು,
ರಾಯಚೂರು.

2. ಸತ್ಯಜ್ಞಾನ ವಚನಗಳು - ಭಾಗ-2 ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಬರೆದಿರುವ ತ್ರಿಪದಿ ಕಾವ್ಯ. ಕವಿ ಸಿದ್ಧರಾಮರ ವ್ಯಕ್ತಿ ಚಿತ್ರಣ ಈ ಕಾವ್ಯದಲ್ಲಿ ಒಳಪದರಾಗಿ ಮೂಡಿ ಬಂದಿದೆ. ಅವರ ಭಾವ ಚಿಂತನೆಗಳು ಓದುಗರನ್ನು ಆತ್ಮ ನಿರೀಕ್ಷಣೆಗೆ ಎಳೆದು ತರುತ್ತವೆ. ಅಂತೆಯೇ ನಾನೂ ಅವುಗಳಿಗೆ ಮಾರು ಹೋದದ್ದು.

ವೈವಿಧ್ಯಮಯ ಲೋಕಾನುಭವದ ಚಿಂತನಶೀಲ ಕವಿ ಎಂಬುದಕ್ಕೆ 'ಸತ್ಯಜ್ಞಾನ ವಚನಗಳು' ಕೃತಿ ನಿದರ್ಶನವಾಗಿದೆ. ಜನಪರವಾದ ಗ್ರಾಮಿಣ ಸಂಸ್ಕೃತಿಯ ಚಿತ್ರಣ ಇಲ್ಲಿ ಮೈದಾಳಿದೆ. ಶ್ರೀ ಸಾಮಾನ್ಯರ ಮನತಟ್ಟುವ ಅಭಿವ್ಯಕ್ತಿ ಪ್ರತಿಭೆ ಇವರ ಬರಹದ್ದಾಗಿದೆ.

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ವೃತ್ತಿಯಿಂದ ಇಂಜೀನಿಯರರು, ಕರ್ಮಯೋಗಿಗಳು, ಅವರದು ಪ್ರಾಮಾಣಿಕ ದುಡಿತ. ಅವರ ಪ್ರವೃತ್ತಿ ಕಾವ್ಯ ಬರೆಯುವುದರತ್ತ. ಹಾಸ್ಯ ಬರಹಗಾರರೂ ಅವರಾಗಿದ್ದಾರೆ. ಪ್ರಬಂಧ, ವ್ಯಕ್ತಿ ಚಿತ್ರಣಗಳನ್ನು ಬರೆದು ಪ್ರಸಿದ್ಧಿ ಪಡೆದಿದ್ದಾರೆ. ಸಾಹಿತ್ಯಕ ಚಟುವಟಿಕೆಗಳಲ್ಲಿ ಸಂಘಟಿತರಾಗಿಯೂ, ಭಾಗವಹಿಸುತ್ತಾ ಬರೆಯುವ ಗೀಳು ಇಟ್ಟುಕೊಂಡಿದ್ದಾರೆ.

ಶ್ರೀ ಪೋಲೀಸ ಪಾಟೀಲರಿಂದ ಇದಕ್ಕೂ ಉತ್ತಮೋತ್ತಮ ಕೃತಿಗಳು ಪ್ರಕಟವಾಗಲಿ, ಸಾರಸ್ವತ ಪ್ರಪಂಚ ಇನ್ನೂ ಶ್ರೀಮಂತವಾಗಲಿ ಎಂದು ಹಾರೈಸುವೆ.

ಡಾ. ಮಲ್ಲಿಕಾರ್ಜುನ ಲಠ್ಠೆ
ನಿರ್ದೇಶಕರು, ಪ್ರಸಾರಾಂಗ,
ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

3. ‘ನಾನೂ ನಮ್ಮಪ್ಪನ್ಹಾಂಗ’ ಎಂಬ ಕವನ ಸಂಕಲನದಿಂದ ಬರವಣಿಗೆಯ ಕ್ಷೇತ್ರಕ್ಕೆ ಕಾಲಿಟ್ಟ ಶ್ರೀ ಪಾಟೀಲ ಸಿದ್ಧರಾಮರು ವಿದ್ಯಾರ್ಥಿ ದೆಸೆಯಲ್ಲಿಯೇ ತಮ್ಮ ಸೃಜನಶೀಲ ಶಕ್ತಿಯನ್ನು ತೋರಿಸಿದ್ದರು. ಇವರ ಅಂದಿನ ಬರವಣಿಗೆಯಲ್ಲಿ ನಾನು ಇವರೊಬ್ಬ ಉತ್ತಮ ಲೇಖಕರಾಗಿ ಬೆಳೆಯಬಲ್ಲರು ಎಂಬ ಭರವಸೆ ತಾಳಿದ್ದೆನು. ಅಂದಿನಿಂದ ಇಂದಿನವರೆಗೆ ಪಾಟೀಲರು ತಮ್ಮ ಪ್ರವೃತ್ತಿಯ ಮೂಲವನ್ನು ಶ್ರೋತವನ್ನು ಹರಿಗಡಿಯದ ಹಾಗೆ ನೋಡಿಕೊಂಡು, ಜೀವನಾನುಭವದ ಸತತ ಗ್ರಾಸದಿಂದ ಪೋಷಿಸಿಕೊಂಡು ಬಂದು ಮೂರು ವೈವಿಧ್ಯಮಯ ಕೃತಿಗಳನ್ನು ಸಾರಸ್ವತ ಪ್ರಪಂಚಕ್ಕೆ ನೀಡಿ ಓದುಗರ ಮೆಚ್ಚುಗೆ ಗಳಿಸಿದ್ದಾರೆ. ಇಂಜೀನಿಯರಿಂಗ್ ವೃತ್ತಿಯಲ್ಲಿಯೂ ಇವರ ಪ್ರತಿಭಾ ಸಾಹಸ ನವನವೋನ್ಮೇಷ ಶಾಲಿಯಾಗಿ ಕಾರ್ಯ ಮಾಡುತ್ತಿದೆ.

ಮೊದಲ ಕವನಸಂಕಲನದಿಂದ ಭರವಸೆ ಮೂಡಿಸಿ, 518 ವಚನಗಳ ‘ಸತ್ಯಜ್ಞಾನ ವಚನ’ಗಳು ಎಂಬ ಕೃತಿಯಿಂದ ಬರವಣಿಗೆಯ ತಾಕತ್ತನ್ನು ಸಾಬೀತುಗೊಳಿಸಿರುವ ಪಾಟೀಲರ ಮೂರನೆಯ ಗ್ರಂಥ, ‘ಹಳ್ಳಿಯ ಹವಳಗಳು’ ಎಂಬ ಪ್ರಬಂಧ ಮಾದರಿಯ ಹಳ್ಳಿಯ ವ್ಯಕ್ತಿಗಳ ಚಿತ್ರಣದ ಹೊತ್ತಿಗೆ ಕವಿತೆ, ವಚನಗಳ ಕಮನೀಯ ಕಿರುನುಡಿಗಳ ಹಂದರವಿಳಿದು ಪಾಟೀಲರ ಲೆಕ್ಕಣಿಕೆ ಇಲ್ಲಿ ಗದ್ಯದ ವಿಸ್ತಾರ ಕ್ಷೇತ್ರಕ್ಕೆ ನುಗ್ಗಿದೆ. ಗ್ರಾಮೀಣ ವ್ಯಕ್ತಿಗಳಲ್ಲಿ ಕಂಡುಬರುವ ವಿಶಿಷ್ಟ ಸದ್ಗುಣ ದುರ್ಗುಣಗಳು, ಅಜ್ಞಾನ, ಆಲಸ್ಯ, ಮಾತಿನ ಬಡಾಯಿತನ, ಹಾಸ್ಯ ಪ್ರೀಯತೆ, ರಸಿಕತೆಗಳನ್ನು ಈ ಕೃತಿ ಹೃದಯಂಗಮವಾಗಿ ನೀಡುತ್ತದೆ. ಪ್ರದೇಶಿಕ ಭಾಷೆಯ ಸೊಗಡು, ನಾಣ್ಣುಡಿ, ಜಾಣ್ಣುಡಿಗಳ ಸಮರ್ಪಕ ಬಳಕೆ ಇವು, ಬರವಣಿಗೆಗೆ ಸಹಜತೆ, ಪರಿಣಾಮ ಕಾರಕತೆಗಳನ್ನುಂಟು ಮಾಡಿವೆ. ‘ಸಾಹುಕಾರ ಸಂಗಪ್ಪ’, ಕೂಳುಬಾಕ ಕಲ್ಲೇಣಿ, ಹಾಗೆ ‘ಸಿಡುಕಿನ ಸಿದ್ದಯ್ಯ’ ಇವರು ಓದುಗರ ಮನಸ್ಸನ್ನು ಸೂರೆಗೊಳ್ಳುವರು. ಸಾಹಿತ್ಯ ಕಾರ್ಯ ಬೋಧನೆಯಲ್ಲ ಎಂದು ಹೇಳಿದರೂ ಶ್ರೀಸಾಮಾನ್ಯನಿಗೆ ಇದು ಅನೇಕ ಸಲ ಪ್ರಯೋಜನಕಾರಿಯಾಗಲೂಬಹುದು.

ಆದುದರಿಂದ ಇಲ್ಲಿಯ ವ್ಯಕ್ತಿ ಚಿತ್ರಣಗಳ ಕೊನೆಯಲ್ಲಿ ಸೂಚ್ಯವಾಗಿ ಬರುವ ಕೆಲವು ಹಿತವಚನಗಳು, ದೋಷಗಳಿಗೆ ದೋಷ ಮುಕ್ತಾರಾಗುವ ಅವಕಾಶವನ್ನು, ದೋಷಗಳ ಸೆಳೆತಕ್ಕೆ ಒಳಗಾಗಬಹುದಾದ ಜನಕ್ಕೆ ಎಚ್ಚರಿಕೆಯ ಫಲಕವನ್ನು ಹಿಡಿಯುತ್ತವೆ. ರಸಿಕರಿಗೆ ರಸದೌತಣವು ಇಲ್ಲಿದೆ.

ಪ್ರೊ. ಪಿ.ವಿ. ಮಲ್ಲಾಪೂರ.

ಕಲಬುರ್ಗಿ

4. ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಅತ್ಯಂತ ಸ್ನೇಹಶೀಲರು, ಖಚಿತ ನಿಲುವಿನ, ವಾಸ್ತವ ದೃಷ್ಟಿಯ, ಪ್ರಾಮಾಣಿಕ ವ್ಯಕ್ತಿ . ಕಂಡದ್ದನ್ನು ಕಂಡಂತೆ ಹೇಳುವ ಅವರ ಕಾವ್ಯ ಎದ್ದು ಬಂದು ಎದೆಗೆ ಒದ್ದಂತಾಗುತ್ತದೆ. ನಯವಂಚಕರಿಗೆ ವಾಹವ್ವಾ ಎಂದು ಅಪ್ಪಿಕೊಳ್ಳುವಂತಾಗುತ್ತದೆ.

ಸಹೃದಯರಿಗೆ, ಸಮಗ್ರದೃಷ್ಟಿ, ನಿಷ್ಪಕ್ಷಪಾತ ವರ್ತನೆ, ಜಾತ್ಯಾತೀತ, ಮನೋಭಾವ, ಸನ್ನಡತೆಯಿಂದ ಗೆಳೆಯರಿಗೆಲ್ಲ ಸಕ್ಕರೆಯ ಗುಳಿಗೆಯಾಗಿದ್ದಾರೆ. ಅನ್ಯಾಯ ಎಲ್ಲಿಯೆ ನಡೆದರೂ ಅದನ್ನುಪ್ರತಿಭಟಿಸುವ ಧೈರ್ಯ ಈ 'ಸಿದ್ಧ' ರಾಮರಲ್ಲಿದೆ.

ಅನೇಕ ಸಿಹಿ-ಕಹಿ ಅನುಭವಗಳನ್ನು ಪಡೆದಿರುವ ಇವರ ಪ್ರತಿಬೆ ಪ್ರಶ್ನಾತೀತ, ಲೋಕ ನಿರೀಕ್ಷಣೆಯಿಂದ ಸಹಜ ಸ್ಪೂರ್ತಿ ಉಕ್ಕಿ ಸಂವೇದನೆಯಾಗಿ ಮಾರ್ಪಟ್ಟು ಕಾವ್ಯ ಸಿಡಿಯುತ್ತದೆ. ಕಲ್ಪನೆಯಲ್ಲಿಯೂ ಇವರು ಹಿಂದೆ ಬೀಳದೆ ಮುನ್ನುಗುತ್ತಾರೆ. ಏಕ ಕಾಲದಲ್ಲಿಯೇ ಭಿನ್ನ ಮನೋ ಧರ್ಮಗಳನ್ನು ಒಳಹೊಕ್ಕು ಅರಿಯುವ ಶಕ್ತಿಯನ್ನು ಹೊಂದಿದ್ದಾರೆ ಎಂದೋ ಕಂಡು, ಕೇಳಿದ ಘಟನೆಗಳನ್ನು ಇಂದೂ ಹೇಳುವ ಸ್ಮರಣಶಕ್ತಿ ಅಸಾಧಾರಣ, ಬದುಕಿನ ಆಗು ಹೋಗುಗಳಿಗೆ ತೀವ್ರವಾಗಿ ಸ್ಪಂದಿಸುವ ತುಡಿತ ಈ ಪಾಟೀಲರಲ್ಲಿದೆ. ತಮ್ಮ ಕಾವ್ಯವನ್ನು ತಾವೇ ಅರೆದು ನೋಡುವ ವಿಮರ್ಶಕನ ಪ್ರಜ್ಞೆ ಪಡೆದಿದ್ದಾರೆ. ಶೀಲ, ನೀತಿ, ಮೌಲ್ಯಗಳನ್ನು ಗೌರವಿಸುವ ದೃಷ್ಟಿ ಅಹ್ಲಾದಕಾರಿ. ಈ ಭಾಗದ ಆಲಕ್ಷಿಸಲಾಗದ ಉತ್ತಮ ಕವಿ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಜಾನಪದ ಸೊಗಡಿನ ಜಾಡಿನಲ್ಲಿ ಮುಂದುವರಿದರೆ ಭವ್ಯ ಭವಿಷ್ಯವನ್ನು ಹೊಂದಿದ್ದಾರೆ.

ಪ್ರೊ. ರವೀಂದ್ರ ಪ್ರ. ಕರ್ಜಗಿ
ಎಂ. ಎ.
ನೂತನ ವಿದ್ಯಾಲಯ, ಕಲಬುರ್ಗಿ

5. ವೃತ್ತಿಯಿಂದ ಇಂಜೀನಿಯರಾದ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಪ್ರವೃತ್ತಿಯಿಂದ ಸಾಹಿತಿಗಳು; ಕವಿಗಳು ಆಗಿದ್ದಾರೆ. ವೃತ್ತಿ ಪ್ರವೃತ್ತಿಗಳನ್ನು ತಮ್ಮ ಜೀವನದಲ್ಲಿ ತಳಕು ಹಾಕಿ ಬದುಕು ಸಾಗಿಸಿದವರು ಪೋಲೀಸ ಪಾಟೀಲರು 'ನಾನೂ ನಮ್ಮಪ್ಪನ್ಹಾಂಗ' ಎಂದು ಹೇಳುತ್ತ 'ಹಳ್ಳಿಯ ಹವಳಗಳು' ಜಾನಪದ ವಿವಿಧ ಮುಖಗಳನ್ನು ಚಿತ್ರಿಸಿ, ಕನ್ನಡಿಗರ ಕೈಗೆ ನೀಡಿದರು. ಉತ್ತಮ ಕವಿಗಳೆಂದು ಹೆಸರು ಮಾಡಿದ ಪೋಲೀಸ ಪಾಟೀಲರು ಒಳ್ಳೆಯ ಪ್ರಬಂಧಕಾರರು ಎಂಬ ಕೀರ್ತಿಗೆ ಪಾತ್ರರಾಗಿದ್ದಾರೆ.

ನೀರಾವರಿ ಇಲಾಖೆ ಜ.ಶಿ.ಕಾ. ಮತ್ತು ಲೋಕೋಪಯೋಗಿ ಇಲಾಖೆಗಳಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜೀನಿಯರರಾಗಿ ಸೇವೆ ಸಲ್ಲಿಸುತ್ತಿರುವ ಪೋಲೀಸ ಪಾಟೀಲರು ದಕ್ಷತೆ ಮತ್ತು ಪ್ರಾಮಾಣಿಕತೆಗೆ ಹೆಸರಾದವರು. ನಿಷ್ಠೆಯೇ ಅವರ ಬದುಕಿನ ಉಸಿರು. ಅಂತೆಯೇ ಆವರು 'ಸತ್ಯಜ್ಞ'ನ ವಚನಗಳನ್ನು ರಚಿಸಿ ಆಧುನಿಕ 'ಸರ್ವಜ್ಞ'ನೆಂದು ಹೆಸರು ಗಳಿಸಿದ್ದಾರೆ. 'ಸತ್ಯಜ್ಞ' ಎಂಬ ವಚನಾಂಕಿತದ ಮೂಲಕ ಕುಸಿಯುತ್ತಿರುವ ಇಂದಿನ ಜೀವನ ಮೌಲ್ಯಗಳನ್ನು ಎತ್ತಿ ಹಿಡಿದಿದ್ದಾರೆ.

ತಮ್ಮ ವೃತ್ತಿಯಲ್ಲಿ ಒಂದು ನಿಮಿಷವೂ ಬಿಡುವಿಲ್ಲದ ಇವರು ವೇಳೆ ದೊರಕಿಸಿಕೊಂಡು ಸಾಹಿತ್ಯ ರಚನೆಯಲ್ಲಿಯೂ ಅಪಾರವಾದ ಸಾಧನೆ ಮಾಡಿದ್ದಾರೆ. ಪ್ರಸ್ತುತಃ ಕಲ್ಯಾಣ ನಾಡಿನ ಶರಣ ಪರಿಷತ್ತು ಬೆಳ್ಳಿ ಹಬ್ಬದ ಸಂದರ್ಭದಲ್ಲಿ ಹೊರತರುತ್ತಲಿರುವ ಮಕ್ಕಳ ಮುತ್ತು ಮಾಲೆಯಲ್ಲಿ ಹಾವಿನ ಹಾಳ ಕಲ್ಲಯ್ಯ ''ಶರಣ'' ರ ಜೀವನ ಚರಿತ್ರೆ ಬರೆದು ಕೊಟ್ಟು ಉಪಕರಿಸಿದ್ದಾರೆ. ಅವರಿಂದ ಇನ್ನೂ ಹಲವಾರು ಕೃತಿಗಳು ಮೂಡಿಬರಲೆಂದು ಹೃದಯ ತುಂಬಿ ಹಾರೈಸಲಾಗಿದೆ.

ಎ. ಕೆ. ರಾಮೇಶ್ವರ
ಗೋದುತಾಯಿ ನಗರ,
ಗುಲಬರ್ಗಾ

6. ಶ್ರೀ ಸಿದ್ಧರಾಮು ಪೋಲೀಸ ಪಾಟೀಲ ಅವರು ವೃತ್ತಿಯಿಂದ ಇಂಜೀನಿಯರರು, ಪ್ರವೃತ್ತಿಯಿಂದ ಸಾಹಿತಿಗಳು. ಕಳೆದ 25 ವರ್ಷಗಳಿಂದ ಸಾಹಿತ್ಯ ಕೃಷಿಯಲ್ಲಿ ತಮ್ಮನ್ನು ಸಕ್ರೀಯವಾಗಿ ತೊಡಗಿಸಿಕೊಂಡ ಶ್ರೀಯುತರು ಇಂದು ಹೈದ್ರಾಬಾದ ಕರ್ನಾಟಕ ಪ್ರದೇಶದ ಗಣ್ಯ ಸಾಹಿತಿಗಳಲ್ಲಿ ಒಬ್ಬರಾಗಿ ಹೆಸರುವಾಸಿಯಾಗಿದ್ದಾರೆ. 'ನಾನೂ ನಮ್ಮಪ್ಪನ್ಹಾಂಗ', 'ನೀನೊಮ್ಮೆ ಸತ್ತು ನೋಡು', 'ಮತ್ತೇಕೆ ಮೂಕವೇದನೆ'. ಈ ಕವನ ಸಂಕಲನಗಳನ್ನು ಹೊರತಂದಿದ್ದಾರೆ. ಸಂಕಲನದಿಂದ ಸಂಕಲನಕ್ಕೆ ಬೆಳೆಯುತ್ತ ಬಂದಿದ್ದಾರೆ. ಇವರ 'ಸತ್ಯಜ್ಞ'ನ ವಚನಗಳು ಎಂಬ ವಿಶಿಷ್ಟ ಕೃತಿ ಸರ್ವಜ್ಞನ ತ್ರಿಪದಿಗಳನ್ನು ಹೋಲುವಂತಹ ತ್ರಿಪದಿಗಳನ್ನು ರಚಿಸಿ ತುಂಬ ಜನಪ್ರೀಯರಾಗಿದ್ದಾರೆ. ಕಾವ್ಯ ಕ್ಕಿಂತಲೂ ಇವರು ಕೃಷಿಗೈದ ಪ್ರಬಂಧಗಳು ತುಂಬ ಸ್ವಾರಸ್ಯಯುತವಾಗಿದೆ. ಇವರ 'ಹಳ್ಳಿಯ ಹವಳಗಳು', ನಾ ಮಾಡ್ಕೊಂಡ ಹಜಾಮತಿ, ಪ್ರಬಂಧ ಸಂಕನಗಳು ಈ ಭಾಗದ ಹಳ್ಳಿಗಾಡಿನ ಜನತೆಯ ಸಮೃದ್ಧವಾದ ಜೀವನಾನುಭವಗಳನ್ನು ಜೀವಂತವಾಗಿ ಹಿಡಿದಿಟ್ಟಿವೆ. ವ್ಹಿ.ಸಿ. ಗೊರೂರು,

ಪ್ರಭುಶಂಕರ, ಹಿರೇಮಲ್ಲೂರು ಈಶ್ವರನ್ ಮುಂತಾದ ಪ್ರಬಂಧಕಾರರ ಸಾಲಿನಲ್ಲಿ ಇವರು ನಿಸ್ಸಂಶಯವಾಗಿಯೂ ನಿಲ್ಲಬಲ್ಲರು.

ಇವರ ಪ್ರಬಂಧಗಳು ಈ ಭಾಗದ ಭಾಷೆಯ ಧ್ವನಿಯನ್ನು, ಮಣ್ಣಿನ ಸತ್ವವನ್ನು ಒಳಗೊಂಡುದು ಗಮನಾರ್ಹವಾಗಿದೆ. ಇವರ ಸಾಹಿತ್ಯ ಕೃಷಿ ನಿರಂತರವಾಗಿ ನಡೆದುದಕ್ಕೆ, ಇವರು ಪ್ರಯೋಗಶೀಲರು ಎಂಬುದಕ್ಕೆ ಇವರು ಬರೆದ ಈ 'ಬುಡಮೇಲಾದ ಗಿಡ' ತತ್ವ ಪದಗಳೇ ಸಾಕ್ಷಿಯಾಗಿವೆ. ಸೃಜನಶೀಲ ಲೇಖಕರು ಯಾವ ಪ್ರಕಾರದಲ್ಲೂ ಗಟ್ಟಿ ಸಾಹಿತ್ಯ ರಚನೆ ಮಾಡಬಲ್ಲರು ಎಂಬುದಕ್ಕೆ ಶ್ರೀಯುತರ ಈ ತತ್ವಪದ ಸಂಕಲನವೇ ಜ್ವಲಂತ ಉದಾಹರಣೆಯಾಗಿದೆ.

ಡಾ. ವ್ಹಿ. ಜಿ. ಪೂಜಾರ
ಕನ್ನಡ ಅಧ್ಯಯನ ಸಂಸ್ಥೆ
ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

7. ಅಫಜಲಪೂರ ತಾಲೂಕಿನ ದಿಗ್ಸಂಗಿ ಗ್ರಾಮದ ಶ್ರೀ ಸಿದ್ಧರಾಮ ಪೋಲೀಸ ಪಾಟೀಲ ಅವರು ಹುಟ್ಟು ಕವಿಗಳು ಮತ್ತು ಹುಟ್ಟು ಸೃಜನಶೀಲರು. ಅವರು ತಮ್ಮ ಹಿರಿಯರ ತಪ್ಪು ಮಾರ್ಗದರ್ಶನದಿಂದ ಇಂಜೀನಿಯರಿಂಗ ಓದಿದವರಾದರೂ ಅವರಿಗೆ ಬಾಲ್ಯದಲ್ಲಿಯೇ ಒಡಗೂಡಿದ ಸಾಹಿತ್ಯಿಕ ಸೃಜನಶೀಲತೆ ಪ್ರವೃತ್ತಿ, ವೃತ್ತಿ ಬದಲಾದರೂ ಮಾಯವಾಗಲಿಲ್ಲ. ಹುಟ್ಟು ಕವಿತ್ವ ಅವರ ಹೃದಯದಲ್ಲಿ ತಲೆ ಎತ್ತುತ್ತಲೇ ಇದ್ದಿತು. ಅಂತೆಯೇ ಇಂಜೀನಿಯರರಾದ ಐದುವರ್ಷಗಳಲ್ಲಿಯೇ ಪ್ರಥಮ ಕವನ ಸಂಕಲನ ಹೊರ ಬಂದೇ ಬಿಟ್ಟಿತು. ಅದರ ಹಿಂದೆ ಎರಡು ವರ್ಷ ಮುಗಿದಿರಲಿಲ್ಲ 'ಸತ್ಯಜ್ಞಾನ ವಚನಗಳು' ಭಾಗ-1 ಪ್ರಕಟವಾಯಿತು. ಅವರು ವಿದ್ಯಾರ್ಥಿಯಾಗಿರುವಾಗಲೇ ಬರೆದ ಹಳ್ಳಿಯ ಹವಳಗಳು 1984 ರಲ್ಲಿ ಬೆಳಕು ಕಂಡಿತು. ಅದಕ್ಕೆ ಉತ್ತಮ ಕೃತಿಯೆಂದು ಗುಲಬರ್ಗಾ ವಿಶ್ವವಿದ್ಯಾಲಯದಿಂದ ಪ್ರೋತ್ಸಾಹ ಧನವೂ ಬಂದಿತು. ಹೀಗೆ ಅವರು ಇಂಜೀನಿಯರರಾದರೂ ಸುಮಾರು ಹದಿನೈದು ಅಪ್ಪಟ ಸಾಹಿತ್ಯಾತ್ಮಕ ಕೃತಿಗಳನ್ನು ಹೊರ ತಂದಿದ್ದಾರಲ್ಲದೆ, ಬೇರೆ ಉನ್ನತ ಸಾಹಿತಿಗಳಾರೂ ಬರೆಯದ 'ಬುಡಮೇಲಾದ ಗಿಡ' ಎಂಬ ಅನುಭವ ಪದಗಳ ಸಂಕಲನವನ್ನು ಪ್ರಕಾಶಪಡಿಸಿದ್ದಾರೆ.

'ಅಲ್ಲಮ ಪ್ರಭುಗಳು' 'ಹಾವಿನಹಾಳ ಕಲ್ಲಯ್ಯ', ಮೊದಲಾದ ಶರಣರ ಚರಿತ್ರಾತ್ಮಕ ಪುಸ್ತಿಕೆಗಳನ್ನು ಬರೆದಿರುವರಾದರೂ ಕಾಡಸಿದ್ಧೇಶ್ವರರನ್ನು ಕುರಿತ ಈ ಕೃತಿ ಅಚ್ಚ ಭಕ್ತಿಯ ಯೋಗದಿಂದ ಅನನ್ಯ ವಾದವಾಗಿದೆಯೆಂಬುದು ನನ್ನ ನಂಬಿಕೆ. ಏಕೆಂದರೆ ಶ್ರೀ ಸಿದ್ಧರಾಮ ಪೋಲೀಸಪಾಟೀಲರು ಕಾಡಸಿದ್ಧರ ಪರಮಾರಾಧಕರು. ಮನೆಯ ಹೆಸರೇ 'ಕಾಡಸಿದ್ಧ ಕೃಪಾ' ಎಂದು ಇರಿಸಿದ್ದಾರೆ.

ಕಾರಭಾಸಗಿಯ ಕಾಡಸಿದ್ಧೇಶ್ವರರೆ ಆಗಲಿ, ಶೇಗುಣಸಿಯ ಕಾಡಸಿದ್ಧೇಶ್ವರರೆ ಆಗಲಿ ಸುಪ್ರಸಿದ್ಧ ಗುರು ರೇವಣಸಿದ್ಧರ ಅಪರಾವತಾರಿಗಳು ಕಾಡು ಜನರಿಗೆ ದೀಕ್ಷೆ ನೀಡುವುದರಿಂದ ಅವರ ಕಾಡಸಿದ್ಧೇಶ್ವರರೆನಿಸಿದರು. ಸಾಹಿತ್ಯ ಸೃಜನಶೀಲತೆಯೊಂದಿಗೆ ಭಕ್ತಿ, ನಂಬುಗೆ, ನಿಷ್ಠೆ ಬೆರೆತಾಗ ಸುವರ್ಣಕ್ಕೆ ಸುವಾಸನೆ ಬರೆದಂತಾಗದೆ ?

ಬಿ. ಮಹಾದೇವಪ್ಪ
ಸಂಪಾದಕರು
''ಅರಿವು ಆಚಾರ'' ಮಾಸ ಪತ್ರಿಕೆ
ಗುಲಬರ್ಗಾ

ಈ ಎಲ್ಲಾ ಸಾಹಿತಿಗಳ ಅಭಿಪ್ರಾಯಗಳನ್ನು ಓದಿದಾಗ, ಸಿದ್ಧರಾಮ ಪೋಲೀಸ ಪಾಟೀಲರು ಒಬ್ಬ ಶ್ರೇಷ್ಠ ಬರಹಗಾರರು ಎಂದು ಗೊತ್ತಾಗುತ್ತದೆ.

## ಅಧ್ಯಾಯ- ಐದು

★ ಶ್ರೀ ಸಿದ್ಧರಾಮ ಪೋಲೀಸ ಪಾಟೀಲ
ಅವರ ಸಾಹಿತ್ಯ ಸತ್ವ

★ ಸಂದರ್ಶನ

# ಅಧ್ಯಾಯ-5

## ಶ್ರೀ ಸಿದ್ಧರಾಮ ಪೋಲೀಸ ಪಾಟೀಲ ಅವರ ಸಾಹಿತ್ಯ ಸತ್ವ

ಜನ ಜೀವನವನ್ನು ಸೂಕ್ಷ್ಮವಾಗಿ ಅವಲೋಕಿಸಿ, ನಿರ್ವಿಕಾರ ಮನಸ್ಸಿನಿಂದ ಬರೆಯುವ ಸಿದ್ಧರಾಮ ಪೋಲೀಸ ಪಾಟೀಲರು ಉತ್ಸಾಹಶಾಲಿ ಕವಿಗಳಾಗಿ ಹೊರ ಹೊಮ್ಮಿದ್ದಾರೆ. ಆತ್ಮ ಸಂತೋಷಕ್ಕಾಗಿ ಜನರ ಸುಧಾರಣೆಯ ಸಲುವಾಗಿ ಸಾಹಿತ್ಯವನ್ನು ರೂಪಿಸಿದರು.

ವೃತ್ತಿಯಿಂದ ಇಂಜೀನಿಯರ್, ಪ್ರವೃತ್ತಿಯಿಂದ ಸಾಹಿತಿ, ಕವಿ, ಚಿಂತಕ, ಆಧುನಿಕ ವಚನಕಾರ, ಶ್ರೀ ಸಿದ್ಧರಾಮ ಪೋಲೀಸ್ ಪಾಟೀಲರು ವೃತ್ತಿ ಜೀವನದಲ್ಲಿ ಇದ್ದ ಪಾವಿತ್ರ್ಯತೆಯನ್ನು, ಪ್ರವೃತ್ತಿ ಜೀವನದಲ್ಲಿ ಇದ್ದ ಪ್ರಾಮಾಣಿಕತೆಯನ್ನು ಕ್ರೋಢಿಕರಿಸಿ, ಪರಿಶುದ್ಧ ಜೀವನ ಸಾಗಿಸಿದ ಪರಮೋಚ್ಚ ಕವಿ. ಪಾಟೀಲರು ಕಾವ್ಯ ಕ್ಷೇತ್ರಕ್ಕೆ ಕಾಲಿರಿಸಿದ್ದು, '' ನಾನೂ ನಮ್ಮಪ್ಪನ್ಹಾಂಗ'' ಎಂಬ ಕವನ ಸಂಕಲನದಿಂದ '' ನಾನೂ ನಮ್ಮಪ್ಪನ್ಹಾಂಗ'' ಎಂದು ಹೇಳುವಲ್ಲಿ ಅಡಗಿದ ಬೆಡಗು, ಬೆರಗು, ಸೊಬಗು, ಓದುಗರೊಡನೆ ಸಮಾಲೋಚನೆ ಮಾಡಿಕೊಳ್ಳಲು ಎಲ್ಲರ ಹರ್ಷ, ಆನಂದ ಉಕ್ಕಿ ಬರುತ್ತದೆ.

ಕಲಬುರ್ಗಿ ಕಲ್ಯಾಣದ ಹೆಬ್ಬಾಗಿಲು, ಇಲ್ಲಿ ಕಾಯಕ, ದಾಸೋಹ, ಸಮಾನತೆ, ಸೌಹಾರ್ದತೆ, ಸೌಜನ್ಯ, ಪುಟ್ಟಕಿಟ್ಟ ಚಿನ್ನದಂತೆ ಪ್ರಕಾಶಮಾನವಾಗಿ ಪ್ರಜ್ವಲಿಸುತ್ತಲಿವೆ. ವಚನ ಸಾಹಿತ್ಯವನ್ನು ಉಂಡು ಅರಗಿಸಿಕೊಂಡ ಪುಣ್ಯವಂತರ ನಾಡಿನಲ್ಲಿ ಹುಟ್ಟಿ ಬೆಳೆದು ಬಂದರು ಈ ಕವಿ. 'ನಾನು ನಮ್ಮಪ್ಪನ್ಹಾಂಗS' ಎಂದು ಹೇಳಿಕೊಳುವಲ್ಲಿ ತೋರಿದ ದಿಟ್ಟತನ, ಗಟ್ಟಿ ಹೆಜ್ಜೆಯ ಗಾರುಡಿಗತನ ಮೋಡಿ ಮಾಡಿವೆ.

" ಇಗೊ ಇಲ್ಲಿಹ ಮಲಿನ ಮನಸ್ಸಿನ ಕ್ಷುದ್ರ ಮನುಜ
ಪರರ ದಾಂಪತ್ಯ ಸುಖ ಕಂಡು ಮನದಿ ಮಿಡುಕುವ
ಹೇಗಾದ್ರು ಕೆಡಿಸಲು ಹಗಲಿರುಳು ಹವಣಿಸುತ
ಮತ್ಸರವೇ ಮೂರ್ತಿ ವೆತ್ತ ಇವನೊಬ್ಬ ಧನುಜ"[1]

" ಮೆದುಳುಳ್ಳ ಮನುಜಗೆ ಇಲ್ಲ ತಿಳುವಳಿಕೆ, ಬುದ್ಧಿ
ಇವನಿಗಿಂತ ಪಕ್ಷಿಗಳಿಗುಂಟು ಹೃದಯ ಶುದ್ಧಿ"[2]

'ಪಕ್ಷಿನೀತಿ' ಈ ಕವನದಲ್ಲಿ ಮನುಷ್ಯನ ಕ್ರೂರ ದೃಷ್ಟಿ, ಕ್ಷುಲ್ಲಕ ಮನಸ್ಸು, ಅಪಕ್ವ ಹೃದಯ ಕಂಡು ಹೀಗಳೆದಿದ್ದಾರೆ. ಬೆಳಗಿನ ಜಾವದಲ್ಲಿ ಗಂಡು - ಹೆಣ್ಣು ಪಕ್ಷಿಗಳು ಕೂಗ್ಯಾಡಿ, ಚೀರ್‍ಯಾಡಿ ಗದ್ದಲ ಮಾಡಿ ಮಜಾ ಮಾಡುವವು. ಆದರೆ ಬೇರೆ ಪಕ್ಷಿಗಳು ಇದು ಕಂಡರೂ ಕಾಣದಂತೆ, ಹತ್ತಿರ ಬರದೆ, ಕಲಹ- ಮತ್ಸರ ಬಿಟ್ಟು ಶಾಂತಿಯಿಂದ ಇರುತ್ತವೆ. ಆದರೆ ಮನುಷ್ಯನಿಗೆ ಈ ತಿಳುವಳಿಕೆ ಬುದ್ಧಿ ಇಲ್ಲವೆಂದು ಮನುಜನಿಗಿಂತ ಪಕ್ಷಿಗಳು ಶ್ರೇಷ್ಠವೆಂದು ಅಭಿಪ್ರಾಯಪಡುತ್ತಾರೆ.

" ಕಾಯಕವೇ ಕೈಲಾಸವೆಂದು
ಧರ್ಮ ಸಾರವ ಭೋಧಿಸಿದರು
ಸತ್ಯ ಕಾಯಕ ನಿಷ್ಠೆ ಶರಣರು
ಮಾರಕ ವಸ್ತುಗಳ ಮಾರಾಟ ಮಾಡಿ
ಅದನ್ನೇ ಕಾಯಕ ಮಾಡಿಕೊಂಡು
ಹೊಟ್ಟೆ ಹೊರೆಯುತ್ತಿಹುದು ದೇಶ ಭ್ರಷ್ಟರು"[3]

ಹನ್ನೆರಡನೆಯ ಶತಮಾನದಲ್ಲಿ ಕಾಯಕವೇ ಕೈಲಾಸವೆಂದು ಶರಣರು ಸತ್ಯ, ಶುದ್ಧ ಕಾರ್ಯ ಮಾಡಿ ಜನರಿಗೆ ದಾರಿ ದೀಪವಾದರು. ಅದೇ ಪವಿತ್ರವಾದ ಈ ನಾಡಿನಲ್ಲಿ, ಮಹಾತ್ಮರು ಭೋಧಿಸಿದ ಧರ್ಮಸಾರವನ್ನು ಗಾಳಿಗೆ ತೂರುತ್ತಿದ್ದಾರೆ. ಮಾರಕಾಸ್ತ್ರಗಳನ್ನು ಮಾರಿ ಇದೇ ತಮ್ಮ ಕಾಯಕವೆಂದು ಹೊಟ್ಟೆ ತಂಬಿಕೊಳ್ಳುತ್ತಿದ್ದಾರೆ. ಇಂದಿನ ಈ ದೇಶ ಭ್ರಷ್ಟರು ವಿಚಿತ್ರವೆಂದು ಪಾಟೀಲರು ಸಿಡಿಮಿಡಿಗೊಳ್ಳುತ್ತಾರೆ.

ತೀರಾ ಹಳೆಯ ಕಾಲದ ಸತ್ಯ, ನಿಷ್ಠೆ, ಪ್ರಾಮಾಣಿಕತೆ, ದಕ್ಷತೆಗಳನ್ನು ಮೈಗೂಡಿಸಿಕೊಂಡು ಇದೇ ಮಾನವ ಜೀವನದ ಮೌಲ್ಯಗಳು. ಇವುಗಳನ್ನು ಅಳವಡಿಸಿಕೊಂಡು ಬಾಳಿದರೆ ತನಗೂ ಸೌಖ್ಯ, ಸಮಾಜಕ್ಕೂ ಹಿತ. ಈ ಮಾತಿಗೆ ಅವರು ಕೊಟ್ಟ ಪ್ರತಿಮೆ ಬಹಳ ಅರ್ಥಪೂರ್ಣವಾಗಿದೆ.

---

1. ನಾನೂ ನಮ್ಮನ್ನ ಅಂಗಸ - ಪಕ್ಷಿ ನೀತಿ - ಪು. ಸಂ. - 09
2. ನಾನೂ ನಮ್ಮನ್ನ ಅಂಗಸ - ಪಕ್ಷಿ ನೀತಿ - ಪು. ಸಂ. - 09
3. ಭೀಮಾಸಿರಿ - ಎ.ಕೆ. ರಾಮೇಶ್ವರ - ಪುಟ.

" ನನ್ನ ಜೀಪ ಬಹಳೇ ಹಿಂದಿನ ಕಾಲದ್ದು,
ಪಕ್ಕಾ ಪೆಟ್ರೋಲ್ ವ್ಯಾಗs ನಡೀವಂಥದ್ದು!
ಹಂಗs ನಡಿಸೀನಿ ಈ ಕಾಲದಲ್ಲೂ
ಆದ್ರ? ಜನಾ ಅಂತಾರ ' ಹಳೆ ಮಾಡೆಲ್ಲು,
ಅದೆಷ್ಟೋ ಜನ, ಅದೇಷ್ಟೋ ಸಲ
ಸಾರಿ, ಸಾರಿ ನಿನಗ ಹೇಳಿದ್ರು,"[4]

ಆದರೆ ನನ್ನ ಪ್ರಾಮಾಣಿಕತನ ಬಿಟ್ಟು ಹೊರಬರಲಿಲ್ಲ ವೆಂದು ಹೇಳುವ ಕವಿಗೆ ಬದುಕಿಗೆ ಸತ್ಯವೇ ಆಧಾರ ಎಂದು ಮನದಟ್ಟಾಗಿದೆ. ಅಂತೆಯೇ ಅವರು ತಾವು ಹಿಡಿದ ಹಾದಿಯನ್ನು ಬಿಡಲಿಲ್ಲ. ಅಂತೆಯೇ ಅವರಿಗೆ ಸತ್ಯ ದರ್ಶನ ಕಾಯುತ್ತಾ ನಿಂತಿದೆ.

ದೇವರು, ದೈವ ಕುರಿತೂ ಕವಿ ವಿವರಿಸಿದ್ದಾರೆ. ಜ್ಞಾನಿಯಾಗಿ ಡಂಭಾಚಾರದ ಬೂಟಾಟಿಕೆಗಳನ್ನು ಖಂಡಿಸಿದ್ದಾರೆ. 'ತಿಳಿದು ತಾಮಸವಳಿದು ಅನುಭವದಿ ಅರಸಿದೊಡಿಹುದು ಕೂಟ' ಎಂದು ಅನುಭಾವ ಮಾರ್ಗದ ಸೂಚನೆ ನೀಡಿದ್ದಾರೆ.

" ತಾಜಿಗಾಗಿ ತಿಕ್ಕಾಟ" ಕವನದಲ್ಲಿ ಜಾತಿ ಮತ, ಬಂಧನ ಬಿಡಿಸಿ ಹಿಂದು ಮುಸ್ಲಿಮರ ಸಂಗಮಕ್ಕೆ ಮಾರ್ಗ ತೋರಿಸಿ ಸೌಂದರ್ಯ ಪ್ರಜ್ಞೆ ಮೆರೆದಿದ್ದಾರೆ.

"ಸೌಂದರ್ಯದಾ ವಸ್ತು ಎಲ್ಲಿದ್ದರೇನು ?
ಯಾರು ಬೇಕಾದವರು ಕಟ್ಟಿಸಿದರೇನು ?
ನದಿ-ಋಷಿ ಮತ್ತು ಸೌಂದರ್ಯದ ಮೂಲ
ಕೆದರಿ ಹುಡುಕುವಲ್ಲೇನರ್ಥವಿಲ್ಲ !"[5]

ತಾಜಮಹಲ್ ಮುಸ್ಲಿಮರ ಮಸೀದಿಯಾಗಿದೆ. ಯಾವ ಜಾತಿಯ ಜನರು ಇಲ್ಲಿ ಹೋಗಬಹುದು. ಸೌಂದರ್ಯ ಸಾಧನವಾಗಿ ಬಳಸಬಹುದು. ಸೌಂದರ್ಯಕ್ಕೆ ಜಾತಿ, ಮತ ವೆಂಬ ಬಂಧನವಿಲ್ಲ. ಮನುಷ್ಯನಿಗೆ ಯಾವ ವಸ್ತುವಿನಿಂದ ಆನಂದ ದೊರೆಯುತ್ತದೆಯೋ , ಆ ವಸ್ತುವಿನಿಂದ ಪಡೆಯುತ್ತಾನೆ. ಅದೇ ಅವನ ಧ್ಯೇಯವಾಗಿದೆ. ಪಾಟೀಲರು ಜಾತಿ-ಮತ ಎಂದು ಕಚ್ಚಾಡುವುದು ಬೇಡವೆಂದು 'ತಾಜಿಗಾಗಿ ತಿಕ್ಕಾಟ' ಕವನದಲ್ಲಿ ನಿರೂಪಿಸಿದ್ದಾರೆ.

'ತುರ್ಕರ ಹೆಣ' ಕವನವೊಂದರಲ್ಲಿ ನಮ್ಮ ದೇಶದ ಮುಖಂಡರು ಸಾರುವ, ಗುರಿ ಮುಟ್ಟದ 'ಗರೀಬಿ ಹಟಾವೋ' ದಂಥ ಬರಿ ಗೊಳ್ಳು ಘೋಷಣೆಗಳನ್ನು ತಮ್ಮ ಅಂತರಾತ್ಮದ ವೇದನೆಯನ್ನು ತೋಡಿಕೊಂಡಿದ್ದಾರೆ.

4. ನೀನೊಮ್ಮೆ ಸತ್ತು ನೋಡು - ಜಿಜೆಲ್ಜೆಜೇಶನರ ಅರ್ಥಾತ್ ಪರಿವರ್ತನೆ. ಪು.ಸಂ. 80
5. ನಾನೂ ನಮ್ಮಪ್ಪನ್ನಾಂಗs - ತಾಜಿಗಾಗಿ ತಿಕ್ಕಾಟ - ಪು. ಸಂ. 26.

'' ನಮ್ಮ ದೇಶದಾನ ಲೀಡರ ಜನಕೂಡಿ
ಬಡತನ ಓಡಿಸಾಕ ಬಹಳ ಪ್ಲ್ಯಾನ ಮಾಡಿ
ಹೊತ್ಕೊಂಡು ಹೊಂಟಾರ 'ಬಡತನ' ಅಂಬೋ ಹೆಣಾನ
'ರಾಜಕಾರಾಣ' ಅಂಬೋ ಮಂಚದ ಮ್ಯಾಗ ಮಲಗಿಸಿ,
'ಮೋಹ' ಅಂಬೋ ಮುಸುಕಿನ್ಯಾಗ ಮುಚ್ಚಿ,
'ಭಾಷಣ' ಅಂಬೋ ಖುರಾನ ಮಂತ್ರ ಪಠಿಸಿ
'ಹೊಂಟಾರ' ಹಾದಿ ಬೀದ್ಯಾಗ ಮೇರಸ್ಕೊಂತ,
ಇದು 'ತುರ್ಕರ ಹೆಣ', ಅಳಬಾರ್ದಂತ !
ಹೆಣ ನಾರಬಾರ್ದ್ದಂತ ಊದ ಹಾಕ್ಯಾರ,
ಬಡವ್ರೂ ಇದನ್ನು ನೋಡಾಕ ಬೆನ್ನ ಹತ್ಯಾರ''[6]

ನಮ್ಮ ದೇಶದ ರಾಜಕೀಯ ಮುಖಂಡರು ಜನರಿಗೆ ಸುಳ್ಳು ಆಶ್ವಾಸನೆ ನೀಡುತ್ತಾರೆ. ಬಡತನ ಹೋಗಲಾಡಿಸುತ್ತೇವೆಂದು ಭಾಷಣ ಮಾಡಿ ರಾಜಕೀಯ ನಡೆಸುತ್ತಾರೆ. ಪಾಟೀಲರು ಬಡ ಜನರ ನೋವುಗಳನ್ನು ಕಂಡು ರಾಜಕೀಯವನ್ನು 'ತುರ್ಕರ ಹೆಣ' ಕ್ಕೆ ಹೋಲಿಸಿದ್ದಾರೆ.

ಇವರಿಗಿರುವ ಜೀವನಾಸಕ್ತಿ ಮತ್ತು ಅದನ್ನು ತಿದ್ದುವ ಬುದ್ಧಿ ಎರಡೂ ಇವರ ಬರಹಕ್ಕೆ ಪ್ರೇರಣೆಯಾಗಿದೆ. ಬರೆಯಬೇಕೆನ್ನುವ ಅದಮ್ಯ ಅಕಾಂಕ್ಷೆಯ ಚೇತನ ಇವರದಾಗಿದೆ.

ಇವರು ಕವಿತೆಗೆ ಸರ್ವಾದರಣೀಯವಾದ ತ್ರಿಪದಿ ಛಂದಸ್ಸನ್ನು ಆರಿಸಿಕೊಂಡಿದ್ದಾರೆ. ಇವರು ವ್ಯವಹಾರ ಜ್ಞಾನ, ಕರ್ತವ್ಯ, ಶ್ರದ್ಧೆ , ಜನರ ರೀತಿ-ನೀತಿ, ಹಾಸ್ಯ, ವಿಡಂಬನೆ ಇವುಗಳನ್ನೆಲ್ಲ ತಮ್ಮ ಕಾವ್ಯದಲ್ಲಿ ಅಳವಡಿಸಿದ್ದಾರೆ. ಇವರ ಬರವಣಿಗೆಗೆ ಅನುಭವ ಪ್ರಧಾನ ಜನಜೀವನವನ್ನು ಸೂಕ್ಷ್ಮವಾಗಿ ಅವಲೋಕಿಸಿ, ನಿರ್ವಿಕಾರ ಮನಸ್ಸಿನಿಂದ ಬರೆಯುತ್ತಾರೆ. ಲೇಖಕ ಅಬಂಧಿತನಾಗಿ, ನಿರಾಸಕ್ತನಾಗಿ, ನಿರ್ಲಿಪ್ತವಾಗಿ ಆತ್ಮ ಸಾಕ್ಷಿಯಂತೆ ಬರೆಯಬೇಕು. ಕವಿತೆಯಲ್ಲಿ ಸಹ ಇವರು ಕೆಲವು ಅಪೂರ್ವ ಹೊವುಗಳನ್ನು ಚಿಮ್ಮಿಸಿದ್ದಾರೆ. ಸರ್ವಜ್ಞನ ಹಾಸ್ಯ ಚಟಾಕಿ ಈ ಕವಿಗೂ ಸ್ಪೂರ್ತಿಯಾಗಬಲ್ಲದು.

'' ಹಳ್ಳಿಯ ಹವಳ'ಗಳು ಎಂಬ ಪ್ರಬಂಧದಲ್ಲಿ ಎಲ್ಲ ಚಿತ್ರಗಳು ಗ್ರಾಮ ಜೀವನದ ವಿವಿಧ ಮುಖಗಳ, ವ್ಯಕ್ತಿಗಳ ಚಿತ್ರಣವನ್ನು ನಮ್ಮ ಮುಂದೆ ತರುತ್ತದೆ. ಪಾಟೀಲರು ಎಷ್ಟು ಸ್ಪಷ್ಟವಾಗಿಯೂ ಕರಾರುವಕ್ಕಾಗಿಯೂ ವರ್ಣಿಸುತ್ತಾರೆಂದರೆ ಅವರ ಮುಂದೆ ಆ ಮುಖಗಳು ಇವೆಯೋ ಎಂದು ನಮಗೆ ತಿಳಿಯುತ್ತದೆ. ಪ್ರತಿಯೊಂದು ಚಿತ್ರವೂ ಬೇರೆ ಬೇರೆಯಾಗಿ ವಿಶಿಷ್ಟವಾದ ಗುಣಗಳುಳ್ಳದ್ದಾಗಿವೆ. ಇಂತಹ ಚಿತ್ರ ರಚನೆಗೆ ಪಾಟೀಲರ ಶೈಲಿ ತುಂಬ ಹೊಂದುತ್ತದೆ. ಇವರ

---

6. ನಾನೂ ನಮ್ಮಪ್ಪನ್ಹಾಂಗs - ತುರ್ಕರ ಹೆಣ - ಪು. ಸಂ. 27.

ಶೈಲಿಯಲ್ಲಿ ಶಕ್ತವಾದ ನೈಜ ಜನಪದ ಗ್ರಾಮೀಣ ನುಡಿಗಟ್ಟು, ಮರಾಠಿ, ಕನ್ನಡ, ಉರ್ದು, ಮಾತುಗಳು ಇವುಗಳ ಆಕರ್ಷಣೀಯ ಸಮ್ಮಿಶ್ರಣವಿದೆ. ಮೇಲು ನೋಟಕ್ಕೆ ಈ ಚಿತ್ರಗಳು ಇನ್ನೂ ಹೆಚ್ಚು ಗಟ್ಟಿಯೂ, ತೀಕ್ಷ್ಣವೂ ಹಾಗೂ ಮೊನಚೂ ಆಗಬಹುದಿತ್ತೇನೋ. ಕೆಲವಡೆ ಆಳಕ್ಕಿಂತ ಅಗಲವೇ ಹೆಚ್ಚಾಗಿರುವಂತೆ ತೋರುತ್ತದೆ. ಶೈಲಿಯ ಅತೀ ಸರಳೀಕರಣವಾದಂತೆ ತೋರುತ್ತದೆ. ಇದಕ್ಕೆ ಕಾರಣ ಲೇಖಕರು ಮನುಷ್ಯ ಸ್ವಭಾವದ ಚಿತ್ರಗಳನ್ನು ಸ್ವಲ್ಪ ವಿನೋದದ ದೃಷ್ಟಿಯಿಂದ ನೋಡುವುದೇ ಆಗಿದೆ. ಪಾಟೀಲರ ಇತರ ಕೃತಿಗಳನ್ನು ಅವಲೋಕಿಸುವಾಗ ಅವರು ಗಂಭೀರವಾಗಿ, ತುಂಬ ಮಾರ್ಮಿಕವಾಗಿ ಹೃದಯಾಂತರಾಳವನ್ನು ಮುಟ್ಟಬಲ್ಲ ಭಾವಗಳನ್ನು ವ್ಯಕ್ತ ಮಾಡುವ ಸಾಮರ್ಥ್ಯವುಳ್ಳವರೆಂಬುದು ಗೊತ್ತಾಗುತ್ತದೆ.

ಶ್ರೀ ಕಾಡಸಿದ್ಧೇಶ್ವರ ವಚನಗಳಲ್ಲಿ ವೀರಶೈವ ಧರ್ಮದ ತತ್ವ ನೀತಿ ಭೋಧೆ ಬಿತ್ತರಗೊಂಡಿರುವುದು. 'ಭಕ್ತನಾದರೆ ಬಾಳೆ ಹಣ್ಣಿನಂತಿರಬೇಕು., ಬೆಲ್ಲದ ಕುಳ್ಳಿಯಂತಿರಬೇಕು, ಮಾವಿನ ಫಲದಂತಿರಬೇಕೆಂಬು'ದನ್ನು ತಮ್ಮ ವಚನಗಳಲ್ಲಿ ಸಾರಿರುವರು. ಜನತೆಯಲ್ಲಿದ್ದ ಅಂಧಶ್ರದ್ಧೆ, ಸ್ವಾರ್ಥ, ದ್ವೇಷಗಳನ್ನು, ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಮನಮಿಡಿಯುವಂತೆ ಖಂಡಿಸಿರುವುದನ್ನು ಲೇಖಕರು ಅವರ ವಚನಗಳಿಂದ ಹೆಕ್ಕಿ ತೆಗೆದಿರುವರು.

ಕವಿಗಳು ತಮಗಾದ ಲೌಕಿಕಾನುಭವವನ್ನು ಕಣ್ಣೆದುರಿಗೆ ನೋಡಿ, ಚಿಂತನಶೀಲರಾಗಿ ಮನಕ್ಕೆ ವೇದ್ಯ ಮಾಡಿಕೊಂಡು ಪ್ರಜ್ಞೆಯ ಮೂಸೆಯಲ್ಲಿ ಸುಂದರವೂ, ಅರ್ಥಪೂರ್ಣವೂ ಆದ ಶಬ್ದಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಸುನೀತಗಳನ್ನು, ಷಟ್ಪದಿಗಳನ್ನು, ಛಂದೋವಿನ್ಯಾಸದಲ್ಲಿ ಹೇಳಲಾಗಿದೆ.

'ಸಾಹಿತಿಗಳ ಸಹವಾಸ' ಪ್ರಬಂಧದಲ್ಲಿ ಸಂಪ್ರದಾಯ, ವಿಜ್ಞಾನ, ಮನೋವಿಜ್ಞಾನ, ಹರಟೆ, ಹಾಸ್ಯ ಲಘು ಬರಹ, ವಿದ್ಯಾರ್ಥಿಗಳಿಗಾಗಿ ನೀತಿ ಪಾಠ ಹೀಗೆ ಹಲವಾರು ವಿಷಯಗಳನ್ನು ಈ ಪ್ರಬಂಧದ ಸಂಕಲನ ಒಳಗೊಂಡಿದೆ.

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಆಸಕ್ತಿ ಪ್ರವೃತ್ತಿ ಸಾಹಿತ್ಯಿಕ. ಆದರೆ ಅವರು ವೃತ್ತಿಯಿಂದ ಇಂಜೀನಿಯರ, ಸುಸಂಸ್ಕೃತ ದೃಷ್ಟಿಕೋನದ ಅವರಿಗೆ ಸಮಾಜದ ಅಂಕು ಡೊಂಕುಗಳನ್ನು ಸಹಿಸಿಕೊಳ್ಳಲಾಗದೆ ಶಬ್ದದಲ್ಲಿ ಹೊರ ಹಾಕುತ್ತಾರೆ. ಹಾಸ್ಯದ ಜೊತೆಗೆ ಕಟು ಸತ್ಯಕ್ಕೂ ಕನ್ನಡಿ ಹಿಡಿದ ನಿಷ್ಠುರತೆ ಅವರದು.

ಇವರ ಇನ್ನೊಂದು ವೈಶಿಷ್ಟ್ಯವೆಂದರೆ ಜನಪದರ ಹಾಡು ಮಾತಿನ ಬಳಕೆ. ಹೈದ್ರಾಬಾದ ಕರ್ನಾಟಕದ ಭಾಷಾ ಸ್ವರೂಪ ತಿಳಿಯ ಬಯಸುವವರು, ಅವರ ಕೃತಿಗಳನ್ನು ಪರಿಶೀಲಿಸಬಹುದಾಗಿದೆ. ಈ ಭಾಗದ ಶಬ್ದ ಸಂಸ್ಕೃತಿಯನ್ನು ಸ್ಪಷ್ಟವಾಗಿ ತೆರೆದು ತೋರಿಸುತ್ತಾರೆ.

ಶ್ರೀ ಪೋಲೀಸ ಪಾಟೀಲರು ಶುದ್ಧಾಂತರಂಗದ ಜೀವನಾನುಭವಿಗಳು. ಒಂದು ದೃಷ್ಟಿಯಿಂದ ಮುಗ್ಧರು.ಸಮಾಜದ ಆಗು ಹೋಗುಗಳನ್ನು ಕಂಡು ಕೆಂಡವಾದರೂ

"ಕಂಡದ್ದು ಹೇಳಿದರೆ
ಕುಂಡಿ ಮೇಲೊದೆಯುವರು
ಕಂಡಾಬಟ್ಟಿ ಹೊಗಳಿದರೆ
ಉಂಡು ಹೋಗೆನ್ನುವರು
ಈ ತತ್ವ ತಿಳಿದವ 'ಜಾಣ'
ಗಳಿಸುವನು ಹಣ
ಇದ್ದದ್ದು ಹೇಳಿದರೆ
ಆಗುವವನು ಹರಕೆಯ ಕೋಣ"[7]

ಇಂದಿನ ಸಮಾಜದ ಧೋರಣೆ, ಜನಮನದ ಇಂಗಿತ ಎರಡೂ ಇದರಲ್ಲಿ ವ್ಯಕ್ತವಾಗಿವೆ. ಅವರ ನೇರ ನುಡಿ, ಬಹಳ ಕಡೆ ಉಪದೇಶವೋ ಟೀಕೆಯೋ ಅನ್ನಿಸುವಂತಿದ್ದರೂ, ಮಾನವ ಸ್ವಭಾವಕ್ಕೆ ಕನ್ನಡಿ ಹಿಡಿಯುತ್ತದೆ.

ಸಿದ್ಧರಾಮ ಪೋಲೀಸ ಪಾಟೀಲರು ತೀವ್ರವಾಗಿ ಬದಲಾಗುತ್ತಿರುವ ವಿದ್ಯಮಾನಗಳನ್ನು ಅನುಮಾನ ಆತಂಕಗಳಿಂಧ ನೋಡುವುದರಲ್ಲದೆ, ಹಳೆಯ ವಿಧಿ ವಿಧಾನಗಳೇ ಇದ್ದು ಕೊಳ್ಳಲಿ ಎಂದು ಹಾರೈಸುತ್ತಾರೆ. ಇತಿ ಮಿತಿಗಳ ಚೌಕಟ್ಟಿನಲ್ಲೇ ಸೊಗಸಾದ ಬದುಕಿಗೆ ಹಾರೈಸುತ್ತಾರೆ; ಕನಸು ಹೆಣೆಯುತ್ತಾರೆ. ಇಷ್ಟಿದ್ದೂ, ಇಡೀ ಸಂಕಲನ ( ಮತ್ತೇಕೆ ಮೂಕವೇದನೆ) ಓದಿ ಮುಗಿಸಿದಾಗ, ಒಂದು ಜೀವನ ಏತ್ತಕ್ಕೋ ಏನನ್ನೋ ಮಿಡಿಯುತ್ತಿದೆ ಇಲ್ಲಿ, ಎಂದು ಸಹೃದಯನಿಗೆ ಅನ್ನಿಸುವದಕ್ಕೆ ಒಂದೇ ಕಾರಣ, ಕವಿಯಲ್ಲಿರುವ ಜೀವಂತಿಯೆ ತುಡಿತ.

'ಸತ್ಯಜ್ಞ' ಎನ್ನುವ ಅಂಕಿತದಲ್ಲಿ ತ್ರಿಪದಿಗಳನ್ನು ರಚಿಸಿ, ಆಧುನಿಕ ಸರ್ವಜ್ಞನ ಖ್ಯಾತೆಗೆ ಪಾತ್ರರಾದವರು. ಶ್ರೀ ಪಾಟೀಲರು ಇವರು ಒಳ್ಳೆಯ ಸುಸಂಸ್ಕೃತ ಮನೆತನದಲ್ಲಿ ಜನಿಸಿರುವರು. ಎಲ್ಲ ಅಧಿಕಾರ ಅಂತಸ್ತುಗಳಿದ್ದರೂ ಸರಳರು, ನಿಗರ್ವಿಗಳು, ಧಾರ್ಮಿಕ ಪರಿಧಿಯಲ್ಲಿಯೇ ಬೆಳೆದವರು. ಆಧುನಿಕ ಬೆಡಗು, ಬಿನ್ನಾಣಗಳಿಗೆ ಮಾರು ಹೋಗದೆ ಹಳೆಯ ಮೌಲ್ಯಗಳನ್ನು

7. ಕವಣೆಗಲ್ಲು - ಕಂಡದ್ದು ಹೇಳಿದರೆ (ಚುಟುಕು-30) ಪು. ಸಂ. 44

ಬದುಕಿನಲ್ಲುಳಿಸಿಕೊಂಡವರು. ವ್ಯಂಗ್ಯ, ವಿಡಂಬನೆ, ಮೊನಚು, ಕೆಚ್ಚು ಮೂಡಿ ಬಂದು, ನೈತಿಕ ಮೌಲ್ಯಗಳಿಗೆ ಹೆಚ್ಚು ಒತ್ತು ಕೊಟ್ಟಿದ್ದಾರೆ.

ಇವರು ಹಾಸ್ಯ ಸಾಹಿತಿಯೂ ಕೂಡಾ ಆಗಿದ್ದಾರೆ. ವಿನೋದ ಸಾಹಿತ್ಯ ಸಂಪಾದನ ಗ್ರಂಥವಾಗಿದೆ. ವಿನೋದ ವೆಂದರೆ ನಗೆ, ಕರುಣೆ ಮತ್ತು ಸರಸ ಸಜ್ಜನಿಕೆಗಳ ಸಮ್ಮಿಲನವೇ ಆಗಿರುತ್ತದೆ. ಹೆಚ್ಚಾಗಿ ಇಂಥ ಬರಹಗಳೇ ಈ ಸಂಕಲನದಲ್ಲಿ ಸೇರಿವೆ. ಯಾವುದೇ ಟೀಕೆ, ತಿರಸ್ಕಾರಗಳಂಥ ಶುದ್ಧ ನಗುವೇ ಎಲ್ಲಕ್ಕೂ ಶ್ರೇಷ್ಠವಾದದ್ದು.

''ನಗುವು ಸಹಜ, ಧರ್ಮ. ನಗೆಸುವುದು ಪರರಧರ್ಮ
ನಗುವ ಕೇಳುತ ನಗುವುದತಿಶಯದ ಧರ್ಮ
ನಗುವ, ನಗಿಸುವ, ನಗುತ ಬಾಳುವ ವರವ ಮಿಗೆ ನೀನು
ಬೇಡಿಕೊಳ್ಳೊ ಮಂಕುತಿಮ್ಮಾ''[8]

ಜೇನು ಹುಳು ಹೂವಿನೊಳಗಿನ ಮಕರಂದ ಹೀರಿ ಜೇನು ತಯಾರಿಸಿ ಪರರಿಗುಣಿಸುವಂತೆ, ಪಾಟೀಲರು ಸಮಾಜದಲ್ಲಿಯ ನಿತ್ಯ ಸತ್ಯವನ್ನು ಹೀರಿ ಜೀವನಕ್ಕೆ ದಾರಿದೀಪವಾಗುವರೆಂಬುದಕ್ಕೆ ಶ್ರೀ ಪೋಲೀಸ ಪಾಟೀಲರ ಕವನಗಳು ಸಾಕ್ಷಿಯಾಗಿವೆ.

ಇವರ ಕವನಗಳಲ್ಲಿ ರೈತರ, ಕೂಲಿಕಾರರ, ಬಡವರ ಬಗ್ಗೆ ಕಳಕಳಿ ಇದೆ. ಕನ್ನಡದ ಬಗ್ಗೆ ಅಭಿಮಾನವಿದೆ.

ಸಮಾಜದಲ್ಲಿಯ ಅದಕ್ಷತೆ, ಅಪ್ರಾಮಾಣಿಕತೆ, ಮೋಸ, ಅನ್ಯಾಯ, ಅತ್ಯಾಚಾರಗಳನ್ನು ನೋಡಿ ಬೇಸತ್ತ ಲೇಖಕರು ಅವುಗಳಿಂದ ಜನರನ್ನು ಹೊರ ಬರುವಂತೆ ಮಾಡಿದ ಪ್ರಯತ್ನಗಳು ಫಲಿಸದಾದಾಗ, ಬೇಸರದಿಂದ ನುಡಿಯುತ್ತಾರೆ.

''ಕಂಡದ್ದು ಬರೆ ಬರೆದು । ಮೊಂಡವಾಯಿತ ಪೆನ್ನು ।
ಮೊಂಡ ಜನ ತಮ್ಮ ಗುಣವ ಬಿಡಲಿಲ್ಲ, ನಾ
ಬೆಂಡಾದೆ ಬಳಲಿ ॥ ಸತ್ಯಜ್ಞ॥''[9]

ಹೀಗೇ ಸಮಾಜದಲ್ಲಿಯ ವಾಸ್ತವತೆಯ ಚಿತ್ರ ಬಿಂಬಿಸುತ್ತಾರೆ. ಇವರ ಲೇಖನಗಳಲ್ಲಿ ಯಾವುದೇ ವಿಚಾರವನ್ನು ಹೇಳುವಾಗ ಕೊನೆಗೆ ಒಂದು ತತ್ವ ನೀತಿಯನ್ನು ಹೇಳುವುದು ಇವರ ಸಾಹಿತ್ಯದ ವೈಶಿಷ್ಟ್ಯವಾಗಿದೆ.

---

8. ವಿನೋದ ಸಾಹಿತ್ಯ-1995-ಡಿ.ವಿ.ಜಿ. ಯವರ ಹೇಳಿಕೆ ಪ್ರಸ್ತಾವನೆಯಿಂದ
9. ಸತ್ಯಜ್ಞನ ವಚನಗಳು - (ಭಾಗ-3). ವೈಯುಕ್ತಿಕ - ಪು. ಸಂ. 1

## ಸಂದರ್ಶನ

ಈ ನಿಬಂಧ ಮಂಡನೆಗೆ ''ಶ್ರೀ ಸಿದ್ಧರಾಮ ಪೋಲೀಸ ಪಾಟೀಲರ ಬದುಕು ಬರಹ'' ವಿಷಯವನ್ನು ಆಯ್ಕೆ ಮಾಡಿಕೊಂಡು, ಅವರೊಂದಿಗೆ ನೇರ ಸಂದರ್ಶನ ಮಾಡಿ, ಅವರ ಬದುಕು ಮತ್ತು ಬರಹದ ಬಗ್ಗೆ ಚರ್ಚಿಸಲಾಯಿತು. ಆ ಸಂದರ್ಶನದ ಕೆಲವು ಅಂಶಗಳು ಈ ಕೆಳಗಿನಂತಿದೆ.

**ಪ್ರ. 1. ಸರ್, ನಿಮಗೆ ಅಧ್ಯಾತ್ಮದಲ್ಲಿ ಆಸಕ್ತಿ ಹೇಗೆ ಬೆಳೆದು ಬಂದಿದೆ ?**

ಉತ್ತರ : ಅಧ್ಯಾತ್ಮವೆಂಬುದು ನನಗೆ ಹುಟ್ಟಿನಿಂದಲೇ ಬಂದಿದೆ. ಚಿಕ್ಕವರಿರುವಾಗಲೇ ನನಗೆ ದೇವರಲ್ಲಿ ಭಕ್ತಿ, ನಂಬಿಕೆ, ಗಾಢವಾಗಿದ್ದಿತು. ದಿನಾಲೂ ದೇವರ ಪೂಜೆ ಮಾಡದೇ ಒಂದು ಹನಿ ನೀರು ಕೂಡ ಬಾಯಲ್ಲಿ ಹಾಕುತ್ತಿರಲಿಲ್ಲ. ಮನೆಯ ದೇವರಾದ ಕಾಡಸಿದ್ಧನಲ್ಲಿ ಅಪಾರ ಭಕ್ತಿ. ಅಲ್ಲದೆ ಊರ ಹೊರಗಿರುವ ಲಕ್ಷ್ಮೀ ದೇವಸ್ಥಾನಕ್ಕೆ ಪ್ರತಿ ಶುಕ್ರವಾರ ತಪ್ಪದೇ ಬರಿಗಾಲಲ್ಲಿ ಹೋಗಿ ನೈವೇದ್ಯ ಅರ್ಪಿಸಿ, ನಮಸ್ಕರಿಸಿ ಬರುತ್ತಿದ್ದೆನು. ಕೀರ್ತನೆ, ಪುರಾಣ ಕೇಳುವುದೆಂದರೆ ನನಗೆ ಹೆಚ್ಚು ಶ್ರದ್ಧೆ.

**ಪ್ರಶ್ನೆ : 2 ಸರ್, ನಿಮ್ಮ ಹವ್ಯಾಸಗಳೇನು ?**

ಉತ್ತರ : ಚಿಕ್ಕಂದಿನಿಂದಲೇ ನನಗೆ ಪಂಚಾಂಗ, ಕುಂಡಲಿ, ಜ್ಯೋತಿಷ್ಯದಲ್ಲಿ ಅಪಾರ ಅನುಭವ, ದಿಗ್ಸಂಗಿಯ ಸುತ್ತ ಮುತ್ತಲಿನ ಹಳ್ಳಿಗಳಲ್ಲಿ ನನ್ನ ಭವಿಷ್ಯ ಪ್ರಚಾರವಾಗಿತ್ತು. ದನ, ಕರು ಕಳೆದು ಹೋದರೆ, ಏನಾದರೂ ಮನೆಯಲ್ಲಿ ತೊಂದರೆಗಳು ಕಾಣಿಸಿಕೊಂಡರೆ, ನನ್ನ ಹತ್ತಿರ ಭವಿಷ್ಯ ಕೇಳಲು ಬರುತ್ತಿದ್ದರು. ಮೂಢ ನಂಬಿಕೆಗಳಿಗೆ ಬೆಲೆ ಕೊಡದೆ ಬಂದವರಿಗೆ ಅನುಕೂಲವಾಗುವ, ಸಮಾಧಾನ ತರುವ, ವಿಚಾರಗಳನ್ನು ಹೇಳಿ ಕಳಿಸುತ್ತಿದೆನು. ಜನ್ಮ ಕುಂಡಲಿ ಹಾಕುವುದರಲ್ಲಿ ಎತ್ತಿದ ಕೈ ; ಅನೇಕ ಜನರಿಗೆ ಪುಕ್ಕಟಿಯಾಗಿ ಜನ್ಮ ಕುಂಡಲಿ ಹಾಕಿ ಕೊಡುತ್ತಿದ್ದೆ. ನನ್ನ ಎಲ್ಲ ಮಕ್ಕಳ, ಅಣ್ಣಂದಿರ ಮಕ್ಕಳ ಜನ್ಮ ಕುಂಡಲಿಯನ್ನು ಹಾಕಿದ್ದೇನೆ.

ನನ್ನ ಇನ್ನೊಂದು ಹವ್ಯಾಸವೆಂದರೆ ಜನಪದ ವೈದ್ಯ, ಗಿಡ-ಗಂಟೆ, ಬೇರು ಬದ್ದಿಗಳಿಂದ ಅನೇಕ ರೋಗಗಳನ್ನು ಸುಲಭವಾಗಿ ಗುಣಪಡಿಸಬಹುದೆಂಬುದು ನನ್ನ ನಿಲುವು. ಅನೇಕ ಸಣ್ಣ ಪುಟ್ಟ ರೋಗಗಳಿಗೆ ನನಗೆ ಆಯುರ್ವೇದವನ್ನೇ ಬಳಸುವ ರೂಢಿ. ಇಂಗ್ಲೀಷ್ ಔಷಧ ಹೊಮಿಯೋಪಥಿ ಹಾಗೂ ಆಯುರ್ವೇದಗಳ ಸಾರವನ್ನು ಚೆನ್ನಾಗಿ ತಿಳಿದಿದ್ದೇನೆ. ಬಡವರಿಗೆ ಸುಲಭವಾಗಿ

ಔಷಧೋಪಚಾರವನ್ನು ಪುಕ್ಕಟೆಯಾಗಿ ಹಂಚುತ್ತಿದ್ದೆ. ಹಳದಿ ಕಾಮಾಲೆಗೆ ನಾನು ಕೊಡುವ ದೇಶಿ ಔಷಧ ಬಹಳ ಪ್ರಸಿದ್ಧವಾಗಿದೆ.

**3. ನಿಮಗೆ ಸಾಹಿತ್ಯದಲ್ಲಿ ಹೇಗೆ ಆಸಕ್ತಿ ಉಂಟಾಯಿತು ಹಾಗೂ ಅದು ಯಾವ ರೀತಿಯಲ್ಲಿ ಬೆಳವಣಿಗೆಯಾಯಿತು.**

ಉತ್ತರ : ನಮ್ಮ ತಂದೆಗೆ ಪುರಾಣ, ಪುಣ್ಯ ಕಥೆಗಳನ್ನು ಕೇಳುವುದೆಂದರೆ ಬಹಳ ಹಿಗ್ಗು. ನಾನು ನಾಲ್ಕನೇ ವರ್ಗದಲ್ಲಿ ಓದುತ್ತಿರುವಾಗಲೇ ರಾಮಾಯಣ, ಮಹಾಭಾರತದ ಗದ್ಯ ಕೃತಿಗಳನ್ನು ಓದಲು ಹಚ್ಚಿದವರು. ತಂದೆ ಶರಣಪ್ಪ ಗೌಡರು ನಾನು ಓದಬೇಕು, ಅವರು ಕುಳಿತು ಕೇಳಬೇಕು. ಕಥೆಯನ್ನು ಕೇಳಲು ಊರಿನ ಅನೇಕ ಹಿರಿಯರು ಬರುತ್ತಿದ್ದರು. ನಮ್ಮದು ಒಂದು ಕಿರಾಣಿ ಅಂಗಡಿ ಇತ್ತು. ಅದರ ಮುಂದೆ ಚಾಪೆ ಹಾಕಿಕೊಂಡು ಕುರಿತು, ನಾನು ಕಥೆಗಳನ್ನು ಓದುತ್ತಿದ್ದರೆ, ಉಳಿದವರು ಕೇಳುತ್ತಿದ್ದರು. ದಿನಾಲೂ ಒಂದೊಂದು ಸಂಧಿಗಳನ್ನು ಓದಲಾಗುತ್ತಿತ್ತು. ಆವಾಗಲೇ ನನಗೆ ಓದುವ ಚಟ ಅಂಟಿಕೊಂಡಿದ್ದು, ಶಬ್ದಗಳ ಸ್ಪಷ್ಟ ಉಚ್ಚಾರ , ನಿರ್ಗಳವಾದ ಓದು ನನ್ನದೇ ಆದ ಒಂದು ವಿಶಿಷ್ಟ ಓದುವ ಶೈಲಿ ಇದ್ದುದ್ದರಿಂದ ಊರವರೆಲ್ಲ ನನಗೆ ಕಥೆ ಓದಿ ಹೇಳಲು ಗಂಟು ಬೀಳುತ್ತಿದ್ದರು. ಕಲಬುರ್ಗಿಗೆ ಓದಲು ಬಂದಾಗಲಂತೂ ಗ್ರಂಥಾಲಯದಿಂದ ಹೊಸ ಹೊಸ ಕಥೆಗಳ ಪುಸ್ತಕಗಳನ್ನು ತೆಗೆದುಕೊಂಡು ಹೋಗಿ, ರಜೆ ದಿನಗಳಲ್ಲಿ ಊರವರಿಗೆ ಓದಿ ಹೇಳುತ್ತಿದ್ದೆ. ಹೈಸ್ಕೂಲಿನಲ್ಲಿ ಕೂಡ ಪಠ್ಯ ಪುಸ್ತಕಗಳನ್ನಲ್ಲದೇ ಗ್ರಂಥಾಲಯದಿಂದ ಹಿರಿಯ ಸಾಹಿತಿಗಳ ಕೃತಿಗಳನ್ನು ತೆಗೆದುಕೊಂಡು ಓದುತ್ತಿದ್ದೆ.

ಹೀಗೆ ತಂದೆಯ ಕಥೆ ಕೇಳುವ ಉತ್ತಮ ಹವ್ಯಾಸ ಊರವರ ಪ್ರೇರಣೆ, ಪ್ರೋತ್ಸಾಹಗಳು ನನಗೆ ಕನ್ನಡ ಸಾಹಿತ್ಯದಲ್ಲಿ ಒಲವು ತೋರಲು ಕಾರಣಗಳಾದವು. ಮತ್ತು ಸಹಕಾರವಾಯಿತೆಂದು ಹೇಳಬಹುದು.

**4. ಸರ್, ನಿಮಗೆ ಬಂದ ಪ್ರಶಸ್ತಿ ಮತ್ತು ಗೌರವಗಳ ಬಗ್ಗೆ ನಿಮ್ಮ ಅನಿಸಿಕೆಯೇನು?**

ಉತ್ತರ: ನಾನು ಎಂದಿಗೂ ಪ್ರಶಸ್ತಿಗಳ ಹಿಂದೆ ಬಿದ್ದವನಲ್ಲ. ನಾನೂ ಬರೆಯುವುದು ಕೂಡಾ ಯಾವುದೇ ಪ್ರಶಸ್ತಿಗಾಗಿ ಅಲ್ಲ. ನನ್ನ ಮನಸ್ಸಿನ ಸಂತೋಷಕ್ಕಾಗಿಯೇ ನಾನು ಸಾಹಿತ್ಯ ಸೃಷ್ಟಿ

ಮಾಡಿದ್ದೇನೆ. ಯಾವುದೇ ಪತ್ರಿಕೆಗೆ ಸಹ ಲೇಖನ, ಕವನ ಕಳಿಸಿದವನಲ್ಲ. ಅವರಾಗಿ ನನಗೆ ಕೇಳಿದರೆ ಮಾತ್ರ ಕಳಿಸುತ್ತೇನೆ. ಆಕಾಶವಾಣಿ, ದೂರದರ್ಶನಗಳಲ್ಲಿ ನಾನಾಗಿಯೇ ಹೋಗಿ ಕಾರ್ಯಕ್ರಮ ಕೊಡಿರೆಂದು ಕೇಳಿದವನಲ್ಲ. ಯಾರೇ ಆಗಲಿ ನನಗೆ ಎಂಥದ್ದೇ ವಿಷಯ ಕೊಟ್ಟು ಬರೆಯಲು ಕೇಳಿಕೊಂಡರೆ, ಇಲ್ಲವೆನ್ನದೇ, ಕಷ್ಟಪಟ್ಟು ನಿಗದಿತ ಸಮಯಕ್ಕೆ ಕೊಡುವ ನಿಷ್ಠಾವಂತ ನಾನಾಗಿ ಮುಂದೆ ಬಂದು ನನಗೆ ಇದನ್ನು ಕೊಡಿರಿ ಎಂದು ಕೇಳುವ ಸ್ವಭಾವ ಹುಟ್ಟಿನಿಂದಲೇ ನನಗಿಲ್ಲ.

ಆದರೆ ನಾನು ಬೇಡಲಿ, ಬಿಡಲಿ ಬರುವ ಕಾಲಕ್ಕೆ ಏನು ಬರುವವೋ ಅವು ಬಂದೇ ಬರುವವು. '' ಹರನೀವ ಕಾಲಕ್ಕೆ ಸಿರಿಯು ಬೆನ್ನಲ್ಲಿ ಬಕ್ಕು'' ಎಂಬ ತತ್ವದವನು. ರಾಷ್ಟ್ರಕವಿ ಕುವೆಂಪು ರವರ ಅಭಿಮಾನಿಯಾದ, ನಾನು ಅವರಂತೆಯೇ ಪ್ರಚಾರ ಪ್ರೀಯತೆಗೆ ಮಾರು ಹೋದವನಲ್ಲ. ಕೀರ್ತಿ ಶನಿ ತೊಲಗಾಚೆ ಎನ್ನುವ ಸ್ವಭಾವ ನನ್ನದು. ಹರ ನೀವ ಕಾಲಕ್ಕೆ ಕೊರಡು ಕೊನರುವುದು, ಬರಡು ಹಯನವಹುದು, ಸಕಲ ಪಡಿಪದಾರ್ಥಗಳು ಇದಿರಲಿಪವು'' ಎಂಬ ಶರಣರ ಮಾತಿನಂತೆ ನಡೆದುಡಿದ್ದೇನೆ.

**5. ವೃತ್ತಿ-ಪ್ರವೃತ್ತಿ ಬೇರೆ ಬೇರೆಯಾದರೂ ಸಾಹಿತ್ಯದಲ್ಲಿ ಸಾಧನೆ ಅಪಾರ. ಅದು ಹೇಗೆ?**

ಉತ್ತರ: ಸಾಹಿತ್ಯದತ್ತ ಒಲವಿದ್ದ ನಾನು, ಒತ್ತಾಯದಿಂದ ಇಂಜಿನಿಯರ್ ಆದೆ. ಆದರೆ ಅದರ ಒಳಗೆ ಅಡಗಿದ್ದ ಆ ಶಾರದಾದೇವಿ ನನ್ನನ್ನ ತೊರೆಯಲಿಲ್ಲ, ಆಗಾಗ ಕಾಡುತ್ತಲೇ ಇದ್ದಳು. ಅಭ್ಯಾಸ ಮಾಡುವಾಗ ಸಹಿತ, ಹಲವಾರು ಕನ್ನಡ ಗ್ರಂಥಗಳನ್ನು ಓದುವುದು, ಲೇಖನ, ಕವನಗಳನ್ನು ಬರೆಯುವುದು, ಮುಂದುವರಿಸಿದೆ. ಆಗಲೇ ಸಾವಿರಾರು ವಚನಗಳು ಬರೆದೆ. ಕಾಲೇಜಿನ ಬಿಡುವಿಲ್ಲದ ಅಭ್ಯಾಸ, ಪ್ರಾಕ್ಟಿಕಲ್ ಮುಂತಾದವುಗಳ ಕಠಿಣ ಸಂದರ್ಭದಲ್ಲಿ ಕೂಡ ನಾನು ನನ್ನ ಮನಃ ಶಾಂತಿಗಾಗಿ ಸಾಹಿತ್ಯದ ಸಂಗವನ್ನು ಬಲವಾಗಿ ಅಂಟಿಸಿಕೊಂಡಿದ್ದೇನು. ಬಾಲ್ಯದಿಂದಲೇ ಬೆನ್ನು ಹತ್ತಿ ಬಂದ ಆ ಹವ್ಯಾಸವನ್ನು ಬಿಡಲು ಹೇಗೆ ಸಾಧ್ಯ? ಕಷ್ಟ ಬಂದಾಗ, ಕಷ್ಟವನ್ನು ಕವನದ ರೂಪದಲ್ಲಿ ಇಳಿಸಿದ್ದೇನೆ. ಸಂತೋಷವಾದಾಗ ಅದನ್ನು ಲೇಖನವಾಗಿಸಿದನು. ನೌಕರಿ ಗಿಟ್ಟಿಸಿಕೊಂಡ ಮೇಲೆ, ನನ್ನ ಜೀವನ ಸ್ವಲ್ಪ ನಿರಾಳವಾಯಿತು. ಚಿಂತೆ ಕಷ್ಟಗಳು ದೂರವಾದವು. ಹೀಗಾಗಿ ಸಾಹಿತ್ಯದ ಕಡೆ ಒಲವು ಇನ್ನೂ

ಹೆಚ್ಚಾಯಿತು. ವೃತ್ತಿ ಬೇರೆಯಾದರೂ ಮೂಲ ಪ್ರವೃತ್ತಿಯನ್ನು ನಾನು ಮುಂದುವರೆಸಿಕೊಂಡು ಬಂದೆ. ನೌಕರಿ ಮಾಡುವಾಗ ಶ್ರೀ ಶಾಂತರಸರ, ಪರಿಚಯವಾಯಿತು. ನನ್ನ ತ್ರಿಪದಿ, ಕವನ, ಲೇಖನಗಳನ್ನು ತರಿಸಿಕೊಂಡು ಓದಿ, ''ಒಬ್ಬ ಇಂಜೀನೀಯರರಾಗಿ ಇಷ್ಟೊಂದು ಸಾಹಿತ್ಯ ರಚನೆ ಮಾಡಿದ್ದು ಹೆಮ್ಮೆ ಎನಿಸಿದೆ. ಇಷ್ಟೆಲ್ಲಾ ಬರೆದು ಮೂಲೆಯಲ್ಲಿ ಇಟ್ಟುಕೊಂಡರೆ ಉಪಯೋಗವಿಲ್ಲ. ನಿಮ್ಮ ವಿಚಾರಗಳು ಜನರಿಗೆ ತಲುಪಬೇಕು. ಅದಕ್ಕಾಗಿ ಸದ್ಯಕ್ಕೆ ಒಂದು ಚಿಕ್ಕ ಕವನ ಸಂಕಲನ ಹೊರ ತರಬೇಕು'' ಎಂದು ತಿಳಿಸಿ ಹೇಳಿದರು. ಅವರೇ ಸ್ವತಃ ಕೆಲವೊಂದು ಕವನಗಳನ್ನು ಆಯ್ಕೆ ಮಾಡಿ ಒಂದು ಕವನ ಸಂಕಲನ ಸಿದ್ಧಗೊಳಿಸಿದರು. ಅದೇ ನನ್ನ ಪ್ರಥಮ ಕವನ ಸಂಕಲನ '' ನಾನೂ ನಮ್ಮ ಪ್ಪನ್ಹಾಂಗS'' - 1978 ರಲ್ಲಿ ರಾಯಚೂರಿನಲ್ಲಿ ಬಿಡುಗಡೆಯಾಗಿ, ನಾನೂ ಸಾಹಿತಿಗಳ ಬಳಗಕ್ಕೆ ಸೇರಿಕೊಂಡೆ. ಅಂದಿನಿಂದ ಇಂದಿನವರೆಗೆ ನಾನು ಬರೆಯುತ್ತಲೇ, ಬಂದಿದ್ದೇನೆ. ಮೂರ್ನಾಲ್ಕು ವರ್ಷಕ್ಕೆ ಒಂದರಂತೆ ಪುಸ್ತಕಗಳನ್ನು ಪ್ರಕಟಿಸುತ್ತಲೇ ಬರುತ್ತಿದ್ದೇನೆ.

# ಅಧ್ಯಾಯ-6

## ಸಮಾರೋಪ

ಕನ್ನಡ ಸಾಹಿತ್ಯ ಪರಂಪರೆಗೆ ಸುದೀರ್ಘವಾದ ಇತಿಹಾಸವಿದೆ. ಪುರಾತನ ಕಾಲದಿಂದಲೂ ಈ ಕನ್ನಡ ಸಾಹಿತ್ಯಕ್ಕೆ ಹಲವಾರು ಮಹನೀಯರು ತಮ್ಮ ಅಮೂಲ್ಯವಾದ ಕೃತಿಗಳನ್ನು ನೀಡುವ ಮುಖಾಂತರ ಕನ್ನಡವನ್ನು ಮೈಗೂಡಿಸಿಕೊಂಡು ಉಳಿಸಿದ್ದಾರೆ. ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ಕಾಲದವರೆಗೂ ಕನ್ನಡದ ಬಗೆಗೆ ಕೆಚ್ಚು, ಅಭಿಮಾನ, ಭಕ್ತಿಯ ಮಹತ್ವವನ್ನು ತಮ್ಮ ಕೃತಿಗಳ ಮೂಲಕ ಎತ್ತಿ ಹಿಡಿದಿದ್ದಾರೆ, ಅಂತಹ ಮಹನೀಯರಲ್ಲಿ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಒಬ್ಬರು. ಸತ್ಯಜ್ಞಾನ ತ್ರಿಪದಿ ವಚನಕಾರರೆಂದೇ ಪ್ರಸಿದ್ದರಾದಂತಹ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಹೊಸಗನ್ನಡ ಸಾಹಿತ್ಯದಲ್ಲಿ ಎದ್ದು ಕಾಣುವಂತಹ ಹೆಸರನ್ನು ಮಾಡಿದ್ದಾರೆ.

ಕನ್ನಡದಲ್ಲಿ ಸಾಹಿತ್ಯದಷ್ಟೇ ಸಾಹಿತ್ಯ ಸೃಷ್ಟಿಕಾರ್ಯ ಜನಪ್ರಿಯವಾಗಿದೆ. ಅಧ್ಯಯನಾಸಕ್ತರಿಗೆ ಸಾಹಿತ್ಯ ಕೃತಿಯಂತೆ ಸಾಹಿತಿಯೂ ಹತ್ತಿರವಾಗಬೇಕು. ಸಾಹಿತ್ಯದ ಜೊತೆ ಜೊತೆಗೆ ಕವಿಯ ಬದುಕು ಮಿಳಿತಗೊಳ್ಳಬೇಕು. ನುಡಿದಂತೆ ನಡೆದವರು, ಬರೆದಂತೆ ಬದುಕಿರುವವರು ನಮ್ಮ ಕನ್ನಡ ಕವಿಗಳು. ಆದ್ದರಿಂದ ಕನ್ನಡ ಸೃಜನ ಸಾಹಿತ್ಯದ ಸೃಷ್ಟಿಕಾರರು ಸಾಹಿತ್ಯ ಕ್ಷೇತ್ರದಲ್ಲಿ ಅಷ್ಟೇ ಮುಖ್ಯವಾಗಿ ಬಿಡುತ್ತಾರೆ. ಕವಿ, ಸಾಹಿತಿ, ಲೇಖಕ ಮುಂತಾದವರ ಬದುಕಿನೊಂದಿಗೆ ಅವರ ಸಾಹಿತ್ಯಾಧ್ಯಯನವು ನಡೆದರೆ ಸಮಗ್ರತೆಗೆ ಇಂಬು ಬರುತ್ತದೆ.

ಈ ನಿಟ್ಟಿನಲ್ಲಿ ಜನಪ್ರೀಯ ಸತ್ಯಜ್ಞಾನ ತ್ರಿಪದಿ ವಚನಕಾರರಾದ ಶ್ರೀ ಸಿದ್ಧರಾಮ ಪೋಲೀಸ ಪಾಟೀಲ ಅವರ ಬದುಕು ಹಾಗೂ ಸಾಹಿತ್ಯ ಸಂಪಾದನೆ, ಕವನ ಪ್ರಬಂಧ, ಜೀವನ ಚರಿತ್ರೆ, ಚುಟುಕು, ತತ್ವಪದ ಮುಂತಾದ ಸೃಜನ ಕಾರ್ಯಗಳನ್ನು ಅಧ್ಯಯನ ಮಾಡುವುದರೊಂದಿಗೆ ಅವರು

ಜನಪ್ರೀಯರಾದರು. ಅವರು ಹುಟ್ಟಿ ಬೆಳೆದ ಪರಿಸರ, ಅವರ ಮನೋಭಾವ, ಶೈಕ್ಷಣಿಕ ತೊಡಕುಗಳು ಹೀಗೆ ಹಲವಾರು ವೈಪರೀತ್ಯಗಳಿಂದ ಕೂಡಿದ ಬದುಕಿನೊಂದಿಗೆ ಸಾಹಿತ್ಯದ ಉಗಮವನ್ನು ಗುರುತಿಸಲಾಗಿದೆ.

ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಒಬ್ಬ ವಿಶಿಷ್ಟ ಬರಹಗಾರರಾಗಿ ಕನ್ನಡ ಸಾಹಿತ್ಯದಲ್ಲಿ ಕಂಡು ಬರುತ್ತಾರೆ. ಅವರ ಬದುಕು ಹಾಗೂ ಸಾಹಿತ್ಯ ಸಾಧನೆಯಿಂದ ಮಹತ್ವದ ಬರಹಗಾರರಾಗಿ ಎಲ್ಲರಿಗಿಂತಲೂ ವಿಶಿಷ್ಟವಾಗಿ ಕಂಗೊಳಿಸುತ್ತಾರೆ. ಸಿದ್ಧರಾಮ ಪೋಲೀಸ ಪಾಟೀಲರು ಕನ್ನಡ ನಾಡು ಕಂಡ ಒಬ್ಬ ಅಪ್ರತಿಮ ಬರಹಗಾರರು. ಅವರು ಓದಿದ್ದು ಇಂಜೀನಿಯರಿಂಗ್ ಆದರೆ, ಅವರ ಆಸಕ್ತಿ ಮಾತ್ರ ಕನ್ನಡದಲ್ಲಿ. ವೃತ್ತಿಯಲ್ಲಿ ಇಂಜೀನಿಯರರಾದರೆ, ಪ್ರವೃತ್ತಿಯಲ್ಲಿ ಕನ್ನಡ ಸಾಹಿತಿಯಾಗಿ ಅಪೂರ್ವ ವ್ಯಕ್ತಿತ್ವದಿಂದ ಕನ್ನಡಿಗರ ಮನಸೂರೆಗೊಂಡವರು. ಅವರ ಸುದೀರ್ಘವಾದ ಬರಹ ಅದ್ಭುತವಾದದ್ದು, ಬೆರುಗುಗೊಳಿಸುವಂಥದ್ದು. ಕವಿಯಾಗಿ, ಲೇಖಕರಾಗಿ, ಮಕ್ಕಳ ಸಾಹಿತಿಯಾಗಿ, ಸಂಪಾದಕರಾಗಿ, ವಚನಕಾರರಾಗಿ, ತತ್ವಪದಕಾರರಾಗಿ ಕನ್ನಡಕ್ಕೆ ಅಪೂರ್ವವಾದ ಕೊಡುಗೆಯನ್ನು ನೀಡಿದವರು. ವಿಶಾಲವಾದ ಕನ್ನಡ ಸಾಹಿತ್ಯಸಾಗರದಲ್ಲಿ ತಲೆ ಎತ್ತಿ ನಿಂತ ದ್ವೀಪಗಳಲ್ಲಿ ಪಾಟೀಲರೂ ಒಬ್ಬರು. ಶ್ರೀ ಸಿದ್ಧರಾಮರ ಜೀವನ ಹಾಗೂ ಸಾಹಿತ್ಯಕ ಸಾಧನೆಯ ಕುರಿತಾಗಿ ಬೆಳಕು ಚೆಲ್ಲುವ ದೃಷ್ಟಿಯಿಂದಲೇ ಈ ಸಂಶೋಧನೆ ಕೈಕೊಳ್ಳಲಾಯಿತು.

ಶ್ರೀ ಸಿದ್ಧರಾಮ ಪೋಲೀಸ ಪಾಟೀಲ ಅವರು 'ನಾನೂ ನಮ್ಮಪ್ಪನ್ಹಾಂಗs' ಎಂಬ ಕವನವನ್ನು ಬರೆಯುವುದರ ಮೂಲಕ ಸಾಹಿತ್ಯ ಲೋಕಕ್ಕೆ ಪಾದಾರ್ಪಣೆ ಮಾಡಿದ್ದಾರೆ. ಕವಿಗಳು ತಮಗಾದ ಲೌಕಿಕಾನುಭವವನ್ನು ಕಣ್ಣೆದುರು ನೋಡಿ, ಚಿಂತನಶೀಲರಾಗಿ, ಮನಕ್ಕೆ ವೇದ್ಯ ಮಾಡಿಕೊಂಡು ಪ್ರಜ್ಞೆಯ ಮೂಸೆಯಲ್ಲಿ ಅದ್ದಿ- ಎದ್ದಿ ಸುಂದರವೂ, ಅರ್ಥಪೂರ್ಣವೂ ಆದ ಶಬ್ದಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಸುನೀತಗಳನ್ನು, ಷಟ್ಪದಿಗಳನ್ನು, ಛಂದೋವಿನ್ಯಾಸದಲ್ಲಿ ಎರಕ ಹೊಯ್ದಿದ್ದಾರೆ. ಮುಕ್ತ ಛಂದಸ್ಸಿನಲ್ಲಿ ಕವನ ಬರೆದು ಪ್ರತಿಬಿಂಬಿಸಿದ್ದಾರೆ. ಪಾಟೀಲರು ಮುದ್ದಾಂ ಕವಿಗಳಲ್ಲ. ಹುಟ್ಟು ಕವಿಗಳು ಎಂಬುದನ್ನು ಅವರ ಕವನಗಳೇ ಸಾರುತ್ತವೆ.

''ಹುಟ್ಟು ಪ್ರತಿಭೆಯು ಇಲ್ದೆ ಹೊಟ್ಟೆ ಪಾಡಿಗೆ ಬರೆದು
ಬಿಟ್ಟಿ ಕೆಲಸವನ್ನು ಮಾಡಿದವನ ಸಾಹಿತ್ಯ
'ಬುಟ್ಟಿ ಕಸ' ವೆಂದ ಸತ್ಯಜ್ಞ''[1]

---

1. ನಾನೂ ನಮ್ಮಪ್ಪನ್ಹಾಂಗs - ಸತ್ಯಜ್ಞನ ವಚನಗಳು-23, ಪುಟ.ಸಂ. 40.

ಅಂಥ ಆತ್ಮ ವಿಶ್ವಾಸವೂ ಅವರದು. ಇವರ ಕವನಗಳಲ್ಲಿ ಸಾಮಾಜಿಕ, ರಾಜಕೀಯ, ಅನೀತಿ, ಅನ್ಯಾಯಗಳು ಚಿತ್ರಿತವಾಗಿದ್ದರೆ, ಕೆಲವೆಡೆ ವಿಡಂಬನೆ, ಹಾಸ್ಯ ಉಪದೇಶಗಳು, ಮೂಡಿಬಂದಿವೆ. ಇವರ ಶೈಲಿ ಸರಳ.ಇವರ ಕವನಗಳಲ್ಲಿ ನವ್ಯತೆಯ ನೆರಳಿದೆ. ಮತ್ತು ಗ್ರಾಮ್ಯ ಮತ್ತು ಗ್ರಾಂಥಿಕ ಭಾಷೆಗಳ ಸಮ್ಮಿಳನವಿದೆ.

ಜನರಲ್ಲಿ ದ್ವಂದ್ವ, ವಿರೋಧಾಭಾಸಗಳನ್ನು ಕಂಡು ವಿಡಂಬನೆಯ ಮೂಲಕ ಚಾಟಿಯಂಥ ಚುಟುಕುಗಳನ್ನು ರಚಿಸಲು ತೊಡಗಿ ಕವಣೆಗಲ್ಲನ್ನು ಎಸೆಯತೊಡಗಿದ್ದಾರೆ. ಅವು ಇಂಥವರಿಗೆ ಬಡಿಯಬೇಕೆಂದಿಲ್ಲ. ವ್ಯಕ್ತಿಗಳಲ್ಲಿಯ ದ್ವಿಮುಖ ವರ್ತನೆಗೆ ಬಡಿದರೆ ಸಾಕೆಂಬುದು ಅವರ ಚುಟುಕಿನ ಆಸೆಯಾಗಿದೆ.

ತನ್ನ ಪ್ರಾಮಾಣಿಕತನ ಬಿಟ್ಟು ಹೊರ ಬರದ ಕವಿಗೆ ಸತ್ಯವೇ ಆಧಾರವೆಂದು ಮನದಟ್ಟಾಗಿದೆ. ಅಂತೆಯೇ ಅವರು ತಾವು ಹಿಡಿದ ಹಾದಿಯನ್ನು ಬಿಡಲಿಲ್ಲ.

ಪಾಟೀಲರು ಬರೆದಿರುವ ತ್ರಿಪದಿ ಕಾವ್ಯ ವಚನಗಳು. ತ್ರಿಪದಿಯನ್ನು ಬಳಸಿಕೊಂಡು ಗಣ, ಪ್ರಾಸ ಸಹಿತವಾಗಿ ಸೂಕ್ಷ್ಮ ಅವಲೋಕನದಿಂದ ವಚನ ರಚಿಸಿದ್ದಾರೆ. ಇಲ್ಲಿ ಹನ್ನೆರಡನೆಯ ಶತಮಾನದ ವಚನಕಾರರ ಧೋರಣೆ ಮುಂದುವರೆದಿದೆ. ತಮ್ಮ ಸುತ್ತಮುತ್ತ ದಿನನಿತ್ಯ ನಡೆಯುವ ಆಗು ಹೋಗುಗಳನ್ನು ಇದ್ದ ಹಾಗೆಯೇ ಚಿತ್ರಿಸಿದ್ದಾರೆ. ಅವರ ತ್ರಿಪದಿಗಳಲ್ಲಿ ಈ ಭಾಗದ ಸಾಮಾಜಿಕ, ಸಾಹಿತ್ಯಕ, ಆರ್ಥಿಕ, ಐತಿಹಾಸಿಕ, ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಒಳನೋಟಗಳನ್ನು ಕಾಣುತ್ತೇವೆ.

ಊರಲ್ಲಿ ಜಾತ್ರೆ, ಉರುಸು, ಖಾಂಡ, ಇತ್ಯಾದಿ ಜರುಗಿದಾಗ ಪೋಲೀಸ ಪಾಟೀಲರದೇ ಮುಂದಾಳತ್ವ ಇರುತ್ತಿತ್ತು. ಆಗ ಗೀ ಗೀ ಹಾಡುಗಾರಿಕೆ, ದೊಡ್ಡಾಟ, ಸಣ್ಣಾಟ, ಜರುಗಿದರೆ ಆ ಸಂದರ್ಭದಲ್ಲಿ ಇವರದೇ ಮುಖ್ಯ ಪಾತ್ರ. ಬಂದು ಹೋಗುವ ಅತಿಥಿಗಳಿಗೆ, ಕವಿ, ಗಾಯಕರಿಗೆ ಪೋಲೀಸ ಪಾಟೀಲರ ಮನೆಯಲ್ಲಿಯೇ ಪ್ರಸಾದ ವ್ಯವಸ್ಥೆ. ಈ ದಾಸೋಹ ಕಾಯಕ ಸಂಸ್ಕೃತಿಯೇ ಅವರಿಗೆ ವಚನ ಬರೆಯಲು ಪ್ರೇರಣೆ ನೀಡಿದೆ. ಅಂತೆಯೇ ಅವರು ಬರೆದ ಸತ್ಯಜ್ಞನ ವಚನಗಳು, ಸರ್ವಜ್ಞನ ವಚನಗಳಂತೆ ಜನಪ್ರೀಯವಾಗಿವೆ.

ಜ್ಞಾನ ಪ್ರಾಪ್ತಿಗಾಗಿ, ಮೋಕ್ಷಕ್ಕಾಗಿ ಈ ಬದುಕಿನ ಜಂಜಾಟದಿಂದ ಬಿಡುಗಡೆಯಾಗಿ, ಮನುಷ್ಯ ಮಾಡಬೇಕಾದ ಪ್ರಯತ್ನಗಳನ್ನು ಈ ತತ್ವಪದಗಳು ಹೇಳುತ್ತವೆ. ಒಬ್ಬ ಸೃಜನಶೀಲ ಚಿಂತಕನಿಗೆ, ಬರಹಗಾರನಿಗೆ ಸಾಹಿತ್ಯದ ಯಾವ ಕ್ಷೇತ್ರದಲ್ಲಾದರೂ ಮುಂದೆ ಬರುವ ಸಾಮರ್ಥ್ಯವಿರುತ್ತದೆ.

ಇವರ ಹಳ್ಳಿಯ ಹವಳಗಳು ಎಂಬ ಪ್ರಬಂಧವು, ಬದುಕಿನ ಹಲವು ಮಗ್ಗಲುಗಳನ್ನು ಎತ್ತಿ ತೋರಿಸುತ್ತದೆ. ಇಲ್ಲಿ ಮೂಡಿರುವ ವ್ಯಕ್ತಿ ಚಿತ್ರಣಗಳು ಹಳ್ಳಿಯ ಬದುಕಿಗೆ ಮಾದರಿಯಾಗಿವೆ. ಕವಿ ಹಳ್ಳಿಯಲ್ಲಿ ಹುಟ್ಟಿ, ಹಳ್ಳಿಯಲ್ಲಿ ಬೆಳೆದು, ಹಳ್ಳಿಯ ನಿಜವಾದ ಸೊಗಡನ್ನು ಅನುಭವಿಸಿದ್ದಾರೆ. ''ನಾ ಮಾಡಿಕೊಂಡ ಹಜಾಮತಿ'' ಎಂಬ ಪ್ರಬಂಧ ಅವರು ಎಂತಹ ಅದ್ಭುತ ಹಾಸ್ಯಗಾರರು ಎಂಬುದಕ್ಕೆ ಸಾಕ್ಷಿಯಾಗಿದೆ.

ಈ ಕವಿಗೆ ಕಾಲಜ್ಞಾನ, ನಾಡೀ ಪರೀಕ್ಷೆ, ಜ್ಯೋತಿಷ್ಯ, ಜಲಶೋಧ, ಮನಶೋಧಗಳತ್ತ ಹೆಚ್ಚಿನ ಒಲವು. ಇಂತಹ ವಿಷಯಗಳ ಮೇಲೆ ಕಣ್ಣಾಡಿಸಿ ಕವಿತೆ ರಚಿಸಿದ್ದಾರೆ. ವಚನ ಬರೆದಿದ್ದಾರೆ. ಗದ್ಯಗಳಲ್ಲಿ ಹಾಸ್ಯ ವಿಡಂಬನೆಗಳ ಸುರಿಮಳೆಯೇ ಮಾಡಿದ್ದಾರೆ. ಕವಿ ಸಿದ್ಧರಾಮ ಪೋಲೀಸ ಪಾಟೀಲರ ಬದುಕು ಬರಹ ಬೇರೆಯಿಲ್ಲ. ಬರಹದಲ್ಲಿ ಬದುಕು, ಬದುಕಿನಲ್ಲಿ ಬರಹ ಹಾಸು ಹೊಕ್ಕಾಗಿದೆ. ಅವರು ಏನೇ ಮಾಡಲಿ, ಬರೆಯಲಿ ಅಲ್ಲಿ ಸತ್ಯ, ನಿಷ್ಠೆ, ಪ್ರಾಮಾಣಿಕತೆ ಇರುತ್ತದೆ. ಅವರ 'ಸ್ನೇಹ ಜೇನು ಹನಿ, ಅವರ ಮಾತು ಅಮೃತ ಖನಿ. ''[2]

ಅಪ್ಪಟ ಆಡು ಭಾಷೆಯಲ್ಲಿ ರಚಿಸಿದ ಕವನಗಳು, ವಚನಗಳು, ಹಾಸ್ಯ ವಿಡಂಬನೆಗಳು ಈ ಮಣ್ಣಿನ ಗುಣವನ್ನು ಗೌರವವನ್ನು ಎತ್ತಿ ಹಿಡಿದಿವೆ. ತಾಂತ್ರಿಕ ಶಿಕ್ಷಣ, ವೃತ್ತಿಯಲ್ಲಿ ತೊಡಗಿದ ಇವರು ಸರಸ ಸಾಹಿತ್ಯದತ್ತ ಮನವಿರಿಸಿ ಬರೆದುದು ಆಶ್ಚರ್ಯವೆನಿಸುತ್ತದೆ.

ಶ್ರೀಯುತ ಸಿದ್ಧರಾಮ ಪೋಲೀಸ ಪಾಟೀಲರು ವ್ಯಕ್ತಿ ಚಿತ್ರಣ, ಪ್ರಬಂಧ, ಹಾಸ್ಯ - ವಿನೋದ, ವಚನ, ತತ್ವಪದ, ಕವನ ಸಂಕಲನ, ಸಂಪಾದನೆ, ಚುಟುಕು, ಜೀವನ ಚರಿತ್ರೆ. ಹೀಗೆ ಹಲವು ಕೃತಿಗಳನ್ನು ನೀಡಿ ಈ ಭಾಗದ ಗಣ್ಯ ಸಾಹಿತಿಗಳ ಸಾಲಿನಲ್ಲಿ ಶೋಭಿಸುತ್ತಿದ್ದಾರೆ. 1981 ರಲ್ಲಿ ನಡೆದ ಜಿಲ್ಲಾ ಎರಡನೇ ಸಾಹಿತ್ಯ ಸಮ್ಮೇಳನದಲ್ಲಿ ಮಿಂಚಿನ ವೇಗದಲ್ಲಿ ಸಂಚರಿಸಿ ಬಹು ಜನರ ಪ್ರೀತಿಗೆ ಪಾತ್ರರಾದ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು 'ಬೆಣ್ಣೆ ತೊರೆ' ಸಂಪಾದನೆ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ, ಸಂಗಡಿಗರೊಂದಿಗೆ ತರುವಲ್ಲಿ ಯಶಸ್ವಿಯಾದರು. ಆದ್ದರಿಂದ ಪಾಟೀಲರು ಒಬ್ಬ ಶ್ರೇಷ್ಠ ಬರಹಗಾರರಾಗಿ ಮುಂದುವರಿದಿದ್ದಾರೆ.

ಒಬ್ಬ ವ್ಯಕ್ತಿಯ ಕುರಿತಾಗಿ ಸಂಶೋಧನೆ ಕೈಗೊಂಡಾಗ, ಆ ವ್ಯಕ್ತಿ ಜನಿಸಿದ ಮನೆತನ, ಸಂಪ್ರದಾಯ, ಸಂಸ್ಕಾರ, ಅಲ್ಲಿನ ಪರಿಸರ, ಪ್ರೇರಣೆಯ ಬಗೆಗೂ ಮಾಹಿತಿಗಳನ್ನು ಸಂಗ್ರಹಿಸಿ

---

2. ಬೀಮಾ ಸಿರಿ - ಎ.ಕೆ. ರಾಮೇಶ್ವರ- ಪುಟ. ಸಂ. 65.

ಅಧ್ಯಯನ ಮಾಡಿ ಅವರ ಬದುಕಿನ ಕಿರು ಪರಿಚಯವನ್ನು ಒದಗಿಸುವ ಪ್ರಯತ್ನವನ್ನು ಈ ನಿಬಂಧದಲ್ಲಿ ಮಾಡಲಾಗಿದೆ. ಪ್ರಸ್ತುತ ನಿಬಂಧದಲ್ಲಿ ಇವರ ಬದುಕಿನ ಮೇಲೆ ಬೆಳಕು ಚೆಲ್ಲುವ ದೃಷ್ಟಿಯಿಂದ ಅವರನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಅವರ ಬದುಕಿನ ಬಗೆಗೆ ಪ್ರಸ್ತುತ ನಿಬಂಧದಲ್ಲಿ ಅತಿಯಾಗಿ ಹೊಗಳಿ ಅಥವಾ ಉತ್ಪ್ರೇಕ್ಷೆ ಮಾಡಿ ಬರೆಯುವದಕ್ಕಿಂತ ಅವರ ಜೀವನವನ್ನು ಸ್ವಲ್ಪದರಲ್ಲಿಯೇ, ಸಂಕ್ಷಿಪ್ತವಾಗಿಯೇ ವಿವರಿಸಲಾಗಿದೆ. ಅದರಲ್ಲಿ ಅವರ ಮನೆತನ, ಬಾಲ್ಯ ಮತ್ತು ಶಿಕ್ಷಣ, ಸಾಹಿತ್ಯಿಕ ಹಿನ್ನೆಲೆ ಹಾಗೂ ಪರಿಸರ, ಅವರ ವೃತ್ತಿ ಹಾಗೂ ಪ್ರವೃತ್ತಿ ಅಲ್ಲದೆ ಅವರ ವ್ಯಕ್ತಿತ್ವದ ಕಿರು ಪರಿಚಯ ಮಾಡಿಕೊಡಲಾಗಿದೆ.

ಪ್ರಸ್ತುತ ನಿಬಂಧದ ಕೇಂದ್ರ ಬಿಂದುಗಳಾಗಿರುವಂತಹ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರು ಕನ್ನಡ ಸಾಹಿತ್ಯ ಕಂಡ ವಿಶಿಷ್ಟ ಬರಹಗಾರರಾಗಿ ಗಮನ ಸೆಳೆದಿದ್ದಾರೆ. ನನ್ನ ಸಂಶೋಧನೆಯಲ್ಲಿ ಅವರ ಬಗೆಗೆ ನಾನು ಗ್ರಹಿಸಿದ್ದು, ಅವರಲ್ಲಿ ಕಂಡದ್ದು, ಸರಳ ಶೈಲಿಯ, ಉದಾತ್ತ ಜೀವನ. ಯಾವುದೇ ಪಂಥಕ್ಕೆ ಅಥವಾ ಗುಂಪುಗಾರಿಕೆಗೆ ಜೋತುಬೀಳದ ವಿಶಾಲ ಮನೋಭಾವದ, ಪರಿಶುದ್ಧ ಮನಸ್ಸನ್ನು ಪಾರಿವಾಳದಂತೆ ಸಾಕಿಕೊಂಡು ಬಂದು ಪಾಟೀಲರು, ವಿಶ್ವಮಾನವರಾಗಿ ಕಂಡುಬರುತ್ತಾರೆ. ಪ್ರಸ್ತುತ ನಿಬಂಧವು ಆಕರ ಸಾಮಗ್ರಿಗಳ ಆಧಾರದೊಂದಿಗೆ ಹಾಗೂ ನನ್ನ ಜ್ಞಾನದ ಮಿತಿಯಲ್ಲಿ ಶ್ರೀ ಸಿದ್ಧರಾಮ ಪಾಟೀಲರ ಬದುಕು ಹಾಗೂ ಬರಹದ ಮೇಲೆ ಬೆಳಕು ಚೆಲ್ಲುವ ಪ್ರಯತ್ನವಾಗಿದೆ. ಸಂಶೋಧನೆಯೆಂಬುದು ನಿರಂತರ ಪ್ರಕ್ರಿಯೆ. ಅದಕ್ಕೆ ಕೊನೆಯೆಂಬುದೇ ಇಲ್ಲ. ಆದದ್ದು ಅಲ್ಪ, ಆಗಬೇಕಾದದ್ದು ಅಪಾರ ಎಂದು ಭಾವಿಸಿರುವ ನಾನು, ನನ್ನ ಅಧ್ಯಯನದ ಅನುಭವದ ಮಿತಿಯಲ್ಲಿ ನನ್ನ ಸಂಶೋಧನೆಯ ವಿಚಾರಗಳು ಇಲ್ಲಿ ಸಾದರಪಡಿಸಿದ್ದೇನೆ.

# ಜೀವನದ ಪ್ರಮುಖ ಘಟನೆಗಳು

1. ಜನನ : 7ನೇ ಜೂನ್ 1946 :

ದಿಗ್ಸಂಗಿ(ಬಿ) ತಾ॥ ಅಫಜಲಪೂರ, ಜಿಲ್ಲಾ॥ ಗುಲಬರ್ಗಾ

2. ವಿದ್ಯಾಭ್ಯಾಸ :

- ಪ್ರಾಥಮಿಕ ಅಭ್ಯಾಸ : 1, 2 ನೇ ಇಯತ್ತೆ ದಿಕಸಂಗಿಯಲ್ಲಿ ,
- 3, 4 ನೇ ಇಯತ್ತೆ ಪ್ರಾಥಮಿಕ ಸರಕಾರಿ ಶಾಲೆ ಭೈರಾಮಡಗಿ ಯಲ್ಲಿ 1955 ರಲ್ಲಿ ಮಾಧ್ಯಮಿಕ ಅಭ್ಯಾಸ
- 5, 6, 7 ನೇ ಇಯತ್ತೆ ಸರಕಾರಿ ಮಾಧ್ಯಮಿಕ ಶಾಲೆ ಗೊಬ್ಬೂರ (ಬಿ) ಯಲ್ಲಿ 1958 ರಲ್ಲಿ.
- ಹೈಸ್ಕೂಲ ವಿದ್ಯಾಭ್ಯಾಸ : 8,9,10 ಹಾಗೂ ಎಚ್.ಸ್.ಸಿ. ಎಂ.ಪಿ. ಶ್ರೀ ಶರಣಬಸವೇಶ್ವರ ಪ್ರೌಢ ಶಾಲೆ, ಕಲಬುರ್ಗಿ.1963 ರಲ್ಲಿ
- ಇಂಜಿನಿಯರಿಂಗ್ ಅಭ್ಯಾಸ ಐದು ವರ್ಷ ಪಿ.ಡಿ.ಎ. ಇಂಜಿನಿಯರಿಂಗ್ ಕಾಲೇಜು, ಗುಲಬರ್ಗಾ ದಲ್ಲಿ 1969 ನೇ ಇಸ್ವಿಯಲ್ಲಿ.

3. ಸರಕಾರಿ ಸೇವೆ :

- 1970 ರಿಂದ 1973 ರವರೆಗೆ ಯು.ಕೆ.ಪಿ. ನಾರಾಯಣಪೂರದಲ್ಲಿ ಜೂನಿಯರ್ ಇಂನಿಯರ್ 1973 ರಿಂದ 1978 ರ ವರೆಗೆ ರಾಯಚೂರಿನ ಯರಮರಸ್ ಕ್ಯಾಂಪಿನಲ್ಲಿ ಜೂನಿಯರ್ ಇಂಜಿನಿಯರ್ ಗ್ರೇಡ್-1 ಆಗಿ ತುಂಗಭದ್ರಾ ಪ್ರೋಜೇಕ್ಟ್‌ನಲ್ಲಿ
- 1978 ರಿಂದ 1983 ರ ವರೆಗೆ ನೀರಾವರಿ ಇಲಾಖೆ . ಆಯ.ಪಿ.ಸಿ. ಸರ್ಕಲ್ ಗುಲಬರ್ಗಾ ದಲ್ಲಿ ಸಹಾಯಕ ಇಂಜೀನಿಯರರಾಗಿ.
- 1983 ರಿಂದ 1986 ರ ವರೆಗೆ ನೀರಾವರಿ ಇಲಾಖೆ ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ.
- 1986 ರಿಂದ 1995 ರ ವರೆಗೆ ಜನಾರೋಗ್ಯ ಶಿಲ್ಪಕಾರ್ಯ ಇಲಾಖೆ ಗುಲಬರ್ಗಾದಲ್ಲಿ ಸಹಾಯಕ ಇಂಜಿನಿಯರ್ ಆಗಿ. 1995 ರಿಂದ

|  |  |  |
|---|---|---|
|  |  | 2004 ರ ವರೆಗೆ ಪಿ.ಡಬ್ಲ್ಯೂಡಿ. ಗುಲಬರ್ಗಾದಲ್ಲಿ ಸಹಾಯಕ ಕಾರ್ಯ ನಿರ್ವಾಹಕ ಇಂಜೀನಿಯರರಾಗಿ. |
| 4. | ನಿವೃತ್ತಿ : | • 2004 ರ ಜೂನ 30 ರಂದು ಸರಕಾರಿ ಸೇವೆಯಿಂದ ನಿವೃತ್ತಿ. |
| 5. | ಮೊದಲ ಕವನ : ಹಾಗೂ ಲೇಖನ | • 1956 ರಲ್ಲಿ ಶ್ರೀ ಶರಣಬಸವೇಶ್ವರ ಪ್ರೌಢ ಶಾಲೆಯ ವಾರ್ಷಿಕ ಸಂಚಿಕೆ 'ಹೂಗೊಂಚಲ'ದಲ್ಲಿ 'ನಾನು ಮಾಡಿಕೊಂಡ ಕ್ಷೌರ' ಎಂಬ ಲೇಖನ ಹಾಗೂ 'ಭಾರತ ಮಾತೆ' ಎಂಬ ಕವನ ಪ್ರಕಟಗೊಂಡಿತು. |
| 6. | ರಾಜ್ಯಕ್ಕೆ ಪ್ರಥಮ : ರ್‍ಯಾಂಕ | • 1963 ರಲ್ಲಿ ಎಚ್. ಎಸ್. ಸಿ. ಎಂ. ಪಿ. ಬೋರ್ಡನ ಪರೀಕ್ಷೆಯಲ್ಲಿ ರಾಜ್ಯಕ್ಕೆ ಪ್ರಥಮ ರ್‍ಯಾಂಕ ಗಳಿಸಿ 'ರಘೋಜಿ ಗೋಲ್ಡ ಮೆಡಲ್' ಪಡೆದದ್ದು.<br>• 1964 ರಲ್ಲಿ ಸ್ಥಳದಲ್ಲಿಯೇ ಪ್ರಬಂಧ ಬರೆಯುವ ಸ್ಪರ್ಧೆಯಲ್ಲಿ ಎಸ್.ಬಿ. ಕಾಲೇಜಿಗೆ ಪ್ರಥಮ ಬಂದು, ಡಾ. ದ.ರಾ. ಬೇಂದ್ರೆ ಯವರಿಂದ ಪ್ರಶಸ್ತಿ ಪಡೆದದ್ದು.<br>• 1965 ರಲ್ಲಿ ಇಂಜಿನೀಯರಿಂಗ ಕಾಲೇಜಿಗೆ ಶ್ರೀ ರಂ. ಶ್ರೀ ಮುಗಳಿಯವರ ಬಂದಾಗ ಪ್ರಥಮವಾಗಿ ಕವಿಗೋಷ್ಠಿಯಲ್ಲಿ ಭಾಗವಹಿಸಿ, 'ಸಂಕ್ರಮಣ' ಎಂಬ ಕವನ ವಾಚಿಸಿದ್ದು. |

**ಕೃತಿಗಳು :**

1. 1978 ರಲ್ಲಿ ಪ್ರಥಮ ಕವನ ಸಂಕಲನ 'ನಾನು ನಮ್ಮಪ್ಪನ್ಹಾಂಗ' ರಾಯಚೂರಿನ ಯರಮರಸ್ ಕ್ಯಾಂಪಿನಲ್ಲಿ ಬಿಡುಗಡೆ
2. 1980 ರಲ್ಲಿ 'ಸತ್ಯಜ್ಞಾನ' ವಚನಗಳು ಭಾಗ-1 ಬಿಡುಗಡೆ,
3. 1981 ರಲ್ಲಿ 'ನಿರಂಜನ ಜಂಗಮ ಅಲ್ಲಮಪ್ರಭು' ಎಂಬ ಚರಿತ್ರೆ ಬಿಡುಗಡೆ.
4. 1984 ರಲ್ಲಿ 'ಹಳ್ಳಿಯ ಹವಳಗಳು' ಎಂಬ ವ್ಯಕ್ತಿ ಚಿತ್ರಣದ ಪುಸ್ತಕ ಬಿಡುಗಡೆ.
5. 1986 ರಲ್ಲಿ 'ನೀನೊಮ್ಮೆ ಸತ್ತು ನೋಡು' ಕವನ ಸಂಕಲನ ಬಿಡುಗಡೆ.
6. 1991 ರಲ್ಲಿ 'ನಾ ಮಾಡ್ಕೊಂಡ ಹಜಾಮತಿ' ಎಂಬ ಪ್ರಬಂಧ ಸಂಕಲನ ಬಿಡುಗಡೆ.

7. 1993 ರಲ್ಲಿ 'ಸತ್ಯಜ್ಞಾನ ವಚನಗಳು' ಭಾಗ-2 ಬಿಡುಗಡೆ.

8. 1996 ರಲ್ಲಿ 'ಭೂಗರ್ಭಜಲ' ವೆಂಬ ಕಿರು ಪುಸ್ತಕ ಗು.ವಿ.ಯದ ಪ್ರಸಾರಾಂಗದಿಂದ ಪ್ರಕಟಣೆ.

9. 1997 ರಲ್ಲಿ ' ಮತ್ತೇಕೆ ಮೂಕ ವೇದನೆ' ಕವನ ಸಂಕಲನ ಬಿಡುಗಡೆ.

10. 1999 ರಲ್ಲಿ ' ಬುಡಮೇಲಾದ ಗಿಡ' ಎಂಬ ತತ್ವಪದಗಳ ಸಂಕಲನ ಬಿಡುಗಡೆ.

11. 2000 ರಲ್ಲಿ ' ಸತ್ಯಜ್ಞಾನ ವಚನಗಳು ಭಾಗ-3' ಬಿಡುಗಡೆ.

12. 2002 ರಲ್ಲಿ ' ಹಾವಿನಹಾಳ ಕಲ್ಲಯ್ಯ' ಎಂಬ ಜೀವನ ಚರಿತ್ರೆ ಬಿಡುಗಡೆ.

13. 2002 ' ಕವಣೆಗಲ್ಲು ' ಎಂಬ ಚುಟುಕುಗಳ ಸಂಕಲನದ ಬಿಡುಗಡೆ.

14. 2006 'ಶ್ರೀ ಕಾಡಸಿದ್ದೇಶ್ವರ'ರು ಎಂಬ ಜೀವನ ಚರಿತ್ರೆ ಬಿಡುಗಡೆ.

15. 2007 'ಪ್ರೋ ಪ್ರಬುಲಿಂಗಯ್ಯ ಮಲ್ಲಾಪುರ' ಎಂಬ ಜೀವನ ಚರಿತ್ರೆಯ ಬಿಡುಗಡೆ

**ಸಂಪಾದನೆ :**

1. ' ಬೆಣ್ಣೆ ತೊರೆ '- 1981 ಕಲಬುರ್ಗಿ ಜಿಲ್ಲಾ 2ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ.

2. 'ಶಬ್ದ ಸೋಪಾನ-'1991 ಕಲಬುರ್ಗಿಜಿಲ್ಲಾ 3ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ.

3. ವಿನೋದ ಸಾಹಿತ್ಯ - 1995 ಕರ್ನಾಟಕ ಸಾಹಿತ್ಯಅಕಾಡೆಮಿ ಬೆಂಗಳೂರರಿಂದ ಪ್ರಕಟಿತ.

4. 'ಕವಿತಾ ಸಂಕಲನ' -2004.

5. 'ಲೋಕೋಪಯೋಗಿ ಇಲಾಖೆ ಮಾಹಿತಿ ಕೈಪಿಡಿ' ಕನ್ನಡ ಅಭಿವೃದ್ಧಿ ಪ್ರಾಧಿಕಾರದಿಂದ ಇನ್ನು ಪ್ರಕಟನೆಗೊಂಡಿಲ್ಲ.

ವಿಳಾಸ : ಕಾಡಸಿದ್ಧ ಕೃಪಾ ಮನೆ ನಂ. 1-867/22 ಎಫ., ಮಹಾವೀರ ನಗರ, ಗುಲಬರ್ಗಾ-02

ದೂರವಾಣಿ : (08472) 228922



1984ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದಿಂದ ರಾಜ್ಯೋತ್ಸವ ಪ್ರಶಸ್ತಿ "ಹಳ್ಳಿಯ ಹವಳಗಳು" ಪುಸ್ತಕಕ್ಕೆ ಡಾ. ಹಾ.ಮಾ.ನಾಯಕರಿಂದ ಸ್ವೀಕರಿಸುತ್ತಿರುವ ಲೇಖಕರು



2006ರಲ್ಲಿ ಜರುಗಿದ ಅಫಜಲಪೂರ ತಾಲೂಕಾ 2ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನ ವಹಿಸಿದಾಗ ಷ.ಬ್ರ.ಹ. ಸಿದ್ಧರಾಮ ಶಿವಾಚಾರ್ಯರು ಮಹಾಂತಪುರ ಹಾಗೂ ತಾಲೂಕ ಶಾಸಕರಾದ ಶ್ರೀ ಎಂ.ವೈ.ಪಾಟೀಲರೊಂದಿಗೆ ಲೇಖಕರು



ಲೇಖಕರಾದ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರೊಂದಿಗೆ ಅವರ ಧರ್ಮಪತ್ನಿ
ಶ್ರೀಮತಿ ಜಗದೇವಿ ಪಾಟೀಲ



ಲೇಖಕರಾದ ಶ್ರೀ ಸಿದ್ಧರಾಮ ಪೋಲೀಸ ಪಾಟೀಲರನ್ನು ಸಂಶೋದಕರಾದ ಜಯಶ್ರೀ ಪಾಟೀಲ ಸಂದರ್ಶಿಸುತ್ತಿರುವುದು

# ಗ್ರಂಥ ಋಣ

| ಕ್ರ ಸಂ. | ಲೇಖಕರು | ಪುಸ್ತಕದ ಹೆಸರು | ಪ್ರಕಾಶನ | ವರ್ಷ |
|---|---|---|---|---|
| 1. | ಡಾ. ಬಸವರಾಜ ಪೋಲೀಸ ಪಾಟೀಲ | ಶಿಕ್ಷಣ ಶಿಲ್ಪಿ, ಮಹಾದೇವಪ್ಪ ರಾಂಪೂರೆ | ಹೈದ್ರಾಬಾದ ಕರ್ನಾಟಕ ಶಿಕ್ಷಣ ಸಂಸ್ಥೆ, ಗುಲಬರ್ಗಾ | 1997 |
| 2. | ರಾಜಪ್ಪ ದಳವಾಯಿ | ಕನ್ನಡ ಸಾಹಿತ್ಯ ಕೋಶ | ಅನುವನಹಳ್ಳಿ ಶಿವನಿ ಅಂಚೆ–577 549, ತರೀಕೆರೆ ತಾ. ಚಿಕ್ಕಮಗಳೂರು ಜಿಲ್ಲೆ | 1996 |
| 3. | ರಾಮೇಶ್ವರ.ಎ.ಕೆ | ಬೀಮಾ ಸಿರಿ | | 1986 |
| 4. | ಶಂಕರ.ವೈ.ಎಸ್ | ಬಹುಮುಖಿ | ಡಾ.ಬಿ.ಜಿ. ಜವಳಿ ಅಬಿಮಾನಿ ಬಳಗ, ಐವಾನ–ಇ–ಶಾಹಿ ರಸ್ತೆ, ಗುಲಬರ್ಗಾ | 2006 |
| 5. | ಪ್ರೊ. ಶಿವರಾಜ ಪಾಟೀಲ | ಧರ್ಮಸಿಂಧು | ಮಹಾಂತೇಶ ಪ್ರಕಾಶನ ಪ್ರಕಾಶನ ಅನಂತ ಜ್ಯೋತಿ ಪ್ರತಿಷ್ಠಾನ, ಗುಲಬರ್ಗಾ | 2005 |
| 6. | ಶೇಷಗಿರಿರಾವ ಎಲ್.ಎಸ್ | ಹೊಸಗನ್ನಡ ಸಾಹಿತ್ಯ ಚರಿತ್ರೆ | ಅಂಕಿತ ಪುಸ್ತಕ, 53, ಶ್ಯಾಮಸಿಂಲ್ ಕಾಂಪ್ಲೆಕ್ಸ್ ಗಾಂಧಿ ಬಜಾರ್, ಮುಖ್ಯ ರಸ್ತೆ, ಬಸವನಗುಡಿ, ಬೆಂಗಳೂರು. | 1999 |
| 7. | ಡಾ. ಸಂಗಮೇಶ ಸವದತ್ತಿಮಠ | ಸಂತುಷ್ಟಿ | ಡಾ. ಸಂಗಮೇಶ ಸವದತ್ತಿ ಮಠ ವಿದ್ಯಾನಿಧಿ ಪ್ರಕಾಶನ, ಗದಗ. | 1993 |
| 8. | ಶ್ರಿ ಸಿದ್ಧರಾಮ ಪೋಲೀಸ ಪಾಟೀಲ | ನಾನೂ ನಮ್ಮಪ್ಪನ್ಹಾಂಗ | ಶ್ರೀ ಕಾಡಸಿದ್ಧೇಶ್ವರ ಪ್ರಕಾಶನ ದಿಗ್ಸಂಗಿ | 1978 |
| 9. | ಶ್ರೀ ಸಿದ್ಧರಾಮ ಪೋಲೀಸ ಪಾಟೀಲ | ಸತ್ಯಜ್ಞನಸ ವಚನಗಳು ಭಾಗ–1 | ಶ್ರೀ ಕಾಡಸಿದ್ಧೇಶ್ವರ ಪ್ರಕಾಶನ ದಿಗ್ಸಂಗಿ | 1980 |
| 10. | ಶ್ರೀ ಸಿದ್ಧರಾಮ ಪೋಲೀಸ ಪಾಟೀಲ | ನಿರಂಜನ ಜಂಗಮ ಅಲ್ಲಮಪ್ರಭು | ರವಿ ಪ್ರಕಾಶನ ಕಲಬುರ್ಗಿ | 1981 |
| 11. | ಶ್ರೀ ಸಿದ್ಧರಾಮ ಪೋಲೀಸ ಪಾಟೀಲ | ಹಳ್ಳಿಯ ಹವಳಗಳು | ಶ್ರೀ ಕಾಡಸಿದ್ಧೇಶ್ವರ ಪ್ರಕಾಶನ ದಿಗ್ಸಂಗಿ | 1984 |
| 12. | ಶ್ರೀ ಸಿದ್ಧರಾಮ ಪೋಲೀಸ ಪಾಟೀಲ | ನೀನೊಮ್ಮೆ ಸತ್ತು ನೋಡು | ಶ್ರೀ ಕಾಡಸಿದ್ಧೇಶ್ವರ ಪ್ರಕಾಶನ ದಿಗ್ಸಂಗಿ | 1986 |
| 13. | ಶ್ರೀ ಸಿದ್ಧರಾಮ ಪೋಲೀಸ ಪಾಟೀಲ | ನಾ ಮಾಡ್ಕೊಂಡ ಹಜಾಮತಿ | ಶ್ರೀ ಕಾಡಸಿದ್ಧೇಶ್ವರ ಪ್ರಕಾಶನ ದಿಗ್ಸಂಗಿ | 1991 |
| 14. | ಶ್ರೀ ಸಿದ್ಧರಾಮ ಪೋಲೀಸ ಪಾಟೀಲ | ಸತ್ಯಜ್ಞನ ವಚನಗಳು ಭಾಗ–2 | ಶ್ರೀ ಕಾಡಸಿದ್ಧೇಶ್ವರ ಪ್ರಕಾಶನ ದಿಗ್ಸಂಗಿ | 1993 |

| | | | | |
|---|---|---|---|---|
| 15. | ಶ್ರೀ ಸಿದ್ಧರಾಮ ಪೋಲೀಸ ಪಾಟೀಲ | ಭೂಗರ್ಭ ಜಲ | ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ | 1996 |
| 16. | ಶ್ರೀ ಸಿದ್ಧರಾಮ ಪೋಲೀಸ ಪಾಟೀಲ | ಮತ್ತೇಕೆ ಮೂಕ ವೇದನೆ | ಶ್ರೀ ಕಾಡಸಿದ್ಧೇಶ್ವರ ಪ್ರಕಾಶನ ದಿಗ್ಸಂಗಿ | 1997 |
| 17. | ಶ್ರೀ ಸಿದ್ಧರಾಮ ಪೋಲೀಸ ಪಾಟೀಲ | ಬುಡಮೇಲಾದ ಗಿಡ | ಶ್ರೀ ಕಾಡಸಿದ್ಧೇಶ್ವರ ಪ್ರಕಾಶನ ದಿಗ್ಸಂಗಿ | 1999 |
| 18. | ಶ್ರೀ ಸಿದ್ಧರಾಮ ಪೋಲೀಸ ಪಾಟೀಲ | ಸತ್ಯಜ್ಞನ ವಚನಗಳು ಭಾಗ-3 | ಸ್ವಾಗತ ಸಮಿತಿ, ಅಖಿಲ ಭಾರತ 68ನೇ ಕನ್ನಡ ಸಾಹಿತ್ಯ ಸಮ್ಮೇಳನ ಬಾಗಲಕೋಟ | 2000 |
| 19. | ಶ್ರೀ ಸಿದ್ಧರಾಮ ಪೋಲೀಸ ಪಾಟೀಲ | ಹಾವಿನಹಾಳ ಕಲ್ಲಯ್ಯ | ಕಲ್ಯಾಣ ನಾಡಿನ ಶರಣ ಪರಿಷತ್ತು, ಅನುಭವ ಮಂಟಪ, ಬಸವಕಲ್ಯಾಣ, ಬೀದರ ಜಿಲ್ಲೆ | 2002 |
| 20 | ಶ್ರೀ ಸಿದ್ಧರಾಮ ಪೋಲೀಸ ಪಾಟೀಲ | ವಿನೋದ ಸಾಹಿತ್ಯ | ಟಿ.ಎಸ್. ದಕ್ಷಿಣಾಮೂರ್ತಿ ರಿಜಿಸ್ಟ್ರಾರ ಕರ್ನಾಟಕ ಸಾಹಿತ್ಯ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು | 1996 |
| 21. | ಶ್ರೀ ಸಿದ್ಧರಾಮ ಪೋಲೀಸ ಪಾಟೀಲ | ಕವಣಿಗಲ್ಲು | ಶ್ರೀ ಕಾಡಸಿದ್ಧೇಶ್ವರ ಪ್ರಕಾಶನ ದಿಗ್ಸಂಗಿ | 2002 |